# ಜಮಖಂಡಿ ಪುರಸಭೆಯ ಅಭಿವೃದ್ಧಿಯ ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯ
ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ
ಸಾದರಪಡಿಸಿದ ಸಂಶೋಧನ ನಿಬಂಧ

ಸಂಶೋಧಕರು
ಶ್ರೀ ಸಂಗಪ್ಪ ಪರಸಪ್ಪ ಆಲಗೂರ
ರಾಜ್ಯಶಾಸ್ತ್ರದ ಉಪನ್ಯಾಸಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು,
ಕೊಕಟನೂರ, ಜಿ. ಬೆಳಗಾವಿ

ಮಾರ್ಗದರ್ಶಕರು
ಡಾ. ಎಸ್. ಓ. ಹಲಸಗಿ
ಅಭಿವೃದ್ಧಿ ಅಧ್ಯಯನ ವಿಭಾಗ
ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ ಹಾರೂಗೇರಿ.
ಜಿ. ಬೆಳಗಾವಿ




ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,
ಹಾರೂಗೇರಿ ಜಿ. ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೯

# ಜಮಖಂಡಿ ಪುರಸಭೆಯ ಅಭಿವೃದ್ಧಿಯ ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯ
ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ
ಸಾದರಪಡಿಸಿದ ಸಂಶೋಧನ ನಿಬಂಧ

ಸಂಶೋಧಕರು :

**ಶ್ರೀ ಸಂಗಪ್ಪ ಪರಸಪ್ಪ ಆಲಗೂರ**

ರಾಜ್ಯಶಾಸ್ತ್ರದ ಉಪನ್ಯಾಸಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು,
ಕೊಕಟನೂರ. ಜಿ. ಬೆಳಗಾವಿ

ಮಾರ್ಗದರ್ಶಕರು :

**ಡಾ. ಎಸ್. ಓ. ಹಲಸಗಿ**
ಅಭಿವೃದ್ಧಿ ಅಧ್ಯಯನ ವಿಭಾಗ
ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ ಹಾರೂಗೇರಿ.
ಜಿ. ಬೆಳಗಾವಿ








**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೬

# ಘೋಷಣಾ ಪತ್ರ

ಬಾಗಲಕೋಟ ಜಿಲ್ಲೆಯ "ಜಮಖಂಡಿ ಪುರಸಭೆಯ ಅಭಿವೃದ್ಧಿಯ ಅಧ್ಯಯನ" ಎಂಬ ಶೀರ್ಷಿಕೆಯ ನಿಬಂಧವನ್ನು ಡಾ. ಎಸ್. ಓ. ಹಲಸಗಿ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೨೫-೦೯-೨೦೦೯

ಶ್ರೀ ಸಂಗಪ್ಪ ಪರಸಪ್ಪ ಆಲಗೂರ
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ.

# ದೃಢೀಕರಣ ಪತ್ರ

ಶ್ರೀ ಸಂಗಪ್ಪ ಪರಸಪ್ಪ ಆಲಗೂರ ಇವರು "ಜಮಖಂಡಿ ಪುರಸಭೆಯ ಅಭಿವೃದ್ಧಿ ಅಧ್ಯಯನ" ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೨೫-೦೯-೨೦೦೯

ಡಾ. ಎಸ್. ಓ. ಹಲಸಗಿ
ಮಾರ್ಗದರ್ಶಕರು,
ಅಭಿವೃದ್ಧಿ ಅಧ್ಯಯನ ವಿಭಾಗ
ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,
ಹಾರೂಗೇರಿ. ಜಿ. ಬೆಳಗಾವಿ

# ಕೃತಜ್ಞತೆಗಳು

ಈ ಸಂಪ್ರಬಂಧವನ್ನು ಕ್ರೂಡಿಕರಿಸುವಲ್ಲಿ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಡಾ. ವ್ಹಿ. ಎಸ್. ಮಾಳಿಯವರಿಗೂ ನನ್ನ ಅನಂತ ಕೃತಜ್ಞತೆಗಳು.

ಈ ಕಿರು ಸಂಪ್ರಬಂಧವನ್ನು ಸಿದ್ಧಪಡಿಸುವಲ್ಲಿ ನನಗೆ ಅನುಮತಿ ನೀಡಿ ಮುಕ್ತಮನಸ್ಸಿನಿಂದ ಸೂಕ್ತ ಸಲಹೆ ಸೂಚನೆಗಳನ್ನು ನೀಡಿರುವಂತಹ ಅಭಿವೃದ್ಧಿ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ. ಸಿ. ಆರ್. ಗುಡಸಿಯವರಿಗೆ ಹಾಗೂ ಮಾರ್ಗದರ್ಶಕರಾದ ಡಾ. ಎಸ್. ಓ. ಹಲಸಗಿಯವರಿಗೂ ನಾನು ಚಿರಋಣಿಯಾಗಿದ್ದೇನೆ.

ನನ್ನ ಇಡೀ ಶಿಕ್ಷಣಕ್ಕೆ ಬೆನ್ನೆಲುಬಾಗಿ ನಿಂತು ಪ್ರೋತ್ಸಾಹಿಸಿ ಬೆಳೆಸಿದ ಪೂಜ್ಯನೀಯ ತಂದೆಯವರಾದ ಶ್ರೀ ಪರಸಪ್ಪ ತಮ್ಮಣ್ಣ ಆಲಗೂರ ಹಾಗೂ ತಾಯಿಯವರಾದ ಶ್ರೀಮತಿ ಸತ್ಯವ್ವ ಪರಸಪ್ಪ ಆಲಗೂರ ಇವರಿಗೆ ಸದಾಕಾಲ ಚಿರಋಣಿಯಾಗಿದ್ದೇನೆ.

ಈ ಅಧ್ಯಯನದ ವರದಿ ತಯಾರಿಕೆಗೆ ಎಲ್ಲಾ ರೀತಿಯಿಂದ ಸಹಾಯ ಸಹಕಾರ ನೀಡಿದಂತಹ ಆತ್ಮೀಯರಾದ ಸರಕಾರಿ ಪ್ರಥಮ ದರ್ಜೆ ಕಾಲೇಜ್ ಕೊಕಟನೂರದ ಪ್ರಾಂಶುಪಾಲರಾದ ಶ್ರೀ ವ್ಹಿ. ಎಸ್. ಕಟ್ಟಿ ಹಾಗೂ ನನ್ನ ಆತ್ಮೀಯರಾದ ಪ್ರೋ. ಪಿ. ಎಲ್. ಪೂಜಾರಿ, ಶ್ರೀ. ಆರ್. ಆರ್. ಪಾಟೀಲ, ಶ್ರೀ ಎಸ್. ಜಿ. ಧರ್ಮಟ್ಟಿ, ಶ್ರೀ ಪಿ. ಎಸ್. ಮಂಟೂರ, ಶ್ರೀ ಎಸ್. ಡಿ. ಸೊಡ್ಡಗಿ, ಶ್ರೀ ಶಿವು ಪೂಜಾರಿ, ಶ್ರೀ ಬಿ. ಬಿ. ಪೂಜಾರಿ ಇವರಿಗೆ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಎಲೆ ಮರೆಯ ಕಾಯಿಯ ಹಾಗೆ ಸದಾಕಾಲ ಭವಿಷ್ಯದ ರೂಪರೇಷೆಯಲ್ಲಿ ಅತ್ಯುನ್ನತ ಪಾಲನ್ನು ತೆಗೆದುಕೊಂಡ ಶ್ರೀಮತಿ ಅನ್ನಪೂರ್ಣಾ ಸಂಗಪ್ಪ ಆಲಗೂರ ಮುದ್ದು ಮಗನಾದ ತರುಣ ಹಾಗೂ ಈ ಸಂಪ್ರಬಂಧವನ್ನು ಬೆರಳಚ್ಚು ಮಾಡಲು ನನ್ನ ಜೊತೆ ಸಹಕಾರ ನೀಡಿದ ಪ್ರೀತಿಯ ಅಳಿಯನಾದ ಮಲ್ಲಿಕಾರ್ಜುನ ಪೂಜಾರಿ ಈ ಸಂಪ್ರಬಂಧದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಈ ಅಧ್ಯಯನಕ್ಕೆ ಸಹಕರಿಸಿದ ನನ್ನ ಎಲ್ಲಾ ಆತ್ಮೀಯರಿಗೂ ಧನ್ಯವಾದಗಳನ್ನು ಸಲ್ಲಿಸಲು ಮರಿಯದೆ ಇರಲಾರೆನು.

ಶ್ರೀ ಸಂಗಪ್ಪ ಪರಸಪ್ಪ ಆಲಗೂರ
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ.

# ಪರಿವಿಡಿ

# ಕೋಷ್ಟಕಗಳ ಪರಿವಿಡಿ

ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧. ಪೀಠಿಕೆ
೨. ಅಧ್ಯಯನದ ಉದ್ದೇಶಗಳು
೩. ಅಧ್ಯಯನದ ಮಹತ್ವ
೪. ಅಧ್ಯಯನದ ವಿಧಾನ
೫. ಅಧ್ಯಯನದ ಇತಿಮಿತಿಗಳು ಅಥವಾ ವ್ಯಾಪ್ತಿ
೬. ಅಧ್ಯಯದ ವಿನ್ಯಾಸ

ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ೧. ಪೀಠಿಕೆ :

ಜಗತ್ತಿನಲ್ಲಿಯೇ ಬೃಹತ ಪ್ರಜಾಪ್ರಭುತ್ವರಾಷ್ಟ್ರವೆಂದು ಕರೆಯಲ್ಪಡುವ ಭಾರತ ಮೂಲತಃ ಹಳ್ಳಿಗಳಿಂದ ಕೂಡಿದ ರಾಷ್ಟ್ರವಾಗಿದೆ. ಹಳ್ಳಿಗಳ ಪ್ರಗತಿಯಾಗದ ಹೊರತು ರಾಷ್ಟ್ರದ ಪ್ರಗತಿ ಅಸಾದ್ಯ ಎಂಬುದು ಮಹಾತ್ಮಾ ಗಾಂಧೀಜಿಯವರ ಅಭಿಪ್ರಾಯವು. ಇಂದು ಎಷ್ಟರ ಮಟ್ಟಿಗೆ ಸರಿಯೆನಿಸುತ್ತದೆ ಎಂಬ ವಿಚಾರವನ್ನು ತಿಳಿದುಕೊಳ್ಳುವುದು ಅವಶ್ಯವಿಲ್ಲದಿದ್ದರೂ, ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ಅಧಿಕಾರವನ್ನು ಹಂಚಿಕೊಂಡ ಈ ಪುರಸಭೆಗಳ ಕಾರ್ಯ ಚಟುವಟಿಕೆಯನ್ನು ತಿಳಿಯುವುದರ ಮೂಲಕ ಗಾಂಧೀಜಿಯವರ ಈ ಹೇಳಿಕೆಯು ಸತ್ಯವೆನಿಸುತ್ತದೆ. ಗ್ರಾಮ ಜೀವನ ಮತ್ತು ನಗರ ಜೀವನದಲ್ಲಿ ವ್ಯತ್ಯಾಸವಿದ್ದು, ನಗರ ಜೀವನವು ಸಂಕೀರ್ಣ ಸಮಸ್ಯೆಯನ್ನು ಹೊಂದಿದ್ದು, ಸಂಘಟನೆಯ ಜೀವನದೊಂದಿಗೆ ಅನೇಕ ಸಮಸ್ಯೆಗಳನ್ನು ಸಮಯಕ್ಕೆ ಸರಿಯಾಗಿ ನಿವಾರಿಸುವಲ್ಲಿ ಈ ಪುರಸಭೆಗಳು ಸಹಾಯಕಾರಿಯಾಗಿವೆ. ಅಲ್ಲದೆ ಈ ಸ್ಥಳೀಯ ಸರ್ಕಾರಗಳು ಜನರ ಮೂಲಭೂತ ಸೌಲಭ್ಯಗಳನ್ನು ಸಮಯಕ್ಕೆ ಸರಿಯಾಗಿ ಪೂರೈಸುವಲ್ಲಿ ಸಹಕಾರಿಯಾಗಿವೆ. ಹಾಗೂ ಈ ಪುರಸಭೆಗಳು ಸ್ಥಳೀಯರಿಂದಲೇ ರಚಿಸಲ್ಪಟ್ಟು, ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ನಿಟ್ಟಿನಲ್ಲಿ ಯಶಸ್ವಿ ಸರ್ಕಾರದ ಅಂಗಗಳಾಗಿವೆ. ಇಂತಹ ಪುರಸಭೆಗಳು ಹತ್ತಿರದ ಜನರನ್ನು ತಲುಪಿ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಕಾರ್ಯಾಚರಣೆಯನ್ನು ಜಾರಿಗೆ ತರುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.[೧] ಇಂತಹ ಒಂದು ಪುರಸಭೆಯು ಸಂಘಟನೆಯೊಂದಿಗೆ ಗುರಿ ಮುಟ್ಟುವ ಹಂತ ಕಂಡಿದೆ. ಹೀಗಾಗಿ ಇದು ಒಂದು ರಾಷ್ಟ್ರದ, ನಗರದ ಅಭಿವೃದ್ಧಿಯನ್ನು ಬೆಳಕಿಗೆ ತರಲು ಗುರುತಿಸಲ್ಪಟ್ಟಿರುವ ಅಭಿವೃದ್ಧಿಯ ಸೂಚಕಗಳಲ್ಲಿ ಒಂದಾಗಿದ್ದು,ಇಂತಹ ಬಂಡವಾಳ ಹೂಡುವಿಕೆಯ ಕಾರ್ಯಚಟುವಟಿಕೆಯು ಹಳ್ಳಿಗಳಿಂದ ವರ್ಗಾಯಿಸಲ್ಪಟ್ಟಿದ್ದು, ಪ್ರಸ್ತುತವಾಗಿ ಈ ಕಾರ್ಯವು ಚಾಲ್ತಿಯಲ್ಲಿದೆ. ಇಂತಹ ಕಾರ್ಯಾಚರಣೆಯು ಆಧುನಿಕ ನಗರ ಸರ್ಕಾರಗಳಲ್ಲಿ ಹೆಚ್ಚಿನ ಬಂಡವಾಳ ಹೂಡುವಿಕೆಗೆ ಸಹಾಯಕಾರಿಯಾಗಿ, ಬ್ರಿಟಿಷರ ಕಾಲದಲ್ಲಿಯೆ ಪುರಸಭೆಗಳಿಗೆ ದೊರೆತ ಪ್ರಾಮುಖ್ಯತೆಯ ಫಲವಾಗಿದೆ ಎಂದು ಹೇಳಬಹುದು. ಇಂತಹ ಕಾರ್ಯಾಚರಣೆಯ ಮಾದರಿಯನ್ನು ನಗರ ಪ್ರದೇಶಗಳಲ್ಲಿ ಮುಂದುವರೆಸಿಕೊಂಡು ಬಂದ ನೆಹರೂರವರು ಸ್ವತಂತ್ರ ಭಾರತದ ಏಳಿಗೆಗಾಗಿ ತಮ್ಮ ಆರ್ಥಿಕ ನೀತಿಯಲ್ಲಿ ಕೈಗಾರಿಕೆಗಳನ್ನು ಬೆಳಸಿ, ಬಂಡವಾಳ ಹೂಡುವಿಕೆಯಲ್ಲಿ ಪ್ರಾಮುಖ್ಯತೆಯನ್ನು ನೀಡಿದರು.

---

೧. ಜೆ. ಬಿ. ಕ್ಲರ್ಕ – 'ದಿ ಲೋಕಲ್ ಗೌರ್ನಮೆಂಟ್ ಅಫ್ ಯುನೈಟೆಡ್ ಕಿಂಗಡಂ', ಲಡಂನ್ – ೧೯೪೮, ಪು.ಸಂ.– ೯.

ಇಂತಹ ಕಾರ್ಯಾಚರಣೆಯನ್ನು "ಹೈಟೆಕ್" ಸರ್ಕಾರಗಳೆಂದು ಹೆಸರು ಪಡೆದಿರುವ ಕಾಂಗ್ರೇಸ್ ಸರ್ಕಾರಗಳು ಮತ್ತು ಕಾಂಗ್ರೇಸ್ಯೇತರ ಸರಕಾರಗಳು ಮುಂದುವರೆಸಿಕೊಂಡು ಬರುತ್ತಿರುವುದು ಬಹುಶಃ ಗಾಂಧೀಜಿಯವರ ಹಳ್ಳಿಗಳ ಬದುಕಿಗೆ ಪ್ರಮುಖ ಟೀಕೆಯಾಗಿದೆ. ಇದೇನೆ ಇದ್ದರೂ ಸಹ ಇಂದು ನಮ್ಮ ಭಾರತ ರಾಷ್ಟ್ರವು ದೇಶದ ಪ್ರಪಂಚದ ರಾಷ್ಟ್ರಗಳ ಮಾಲಿಕೆಯಲ್ಲಿ ಮೂರನೇಯ ಜಗತ್ತಿನ ರಾಷ್ಟ್ರಗಳಲ್ಲಿ ಒಂದಾಗಿದೆ. ಮತ್ತು ಈ ಐವತ್ತೈದು ವರ್ಷಗಳಲ್ಲಿ ಪಂಡಿತ ಜವಾಹರಲಾಲ ನೆಹರೂ ಅನಂತರ ಶ್ರೀಮತಿ ಇಂದಿರಾ ಗಾಂಧೀ ರೂಪಿಸಿದ ಧೋರಣೆಗಳಿಂದಾಗಿ ವಿಜ್ಞಾನ ತಂತ್ರಜ್ಞಾನಗಳನ್ನಾಧರಿಸಿ, ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಒಪ್ಪಿಕೊಂಡು, ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೆ ತಂದು, ದೇಶದ, ನಗರದ ಸಮಸ್ಯೆಗಳನ್ನು ಬಗೆಹರಿಸುವ ಪ್ರಯತ್ನ ನಡೆಸಿ, ಪ್ರಪಂಚದ ಔದ್ಯೋಗಿಕ ರಾಷ್ಟ್ರಗಳಲ್ಲಿ ಎಂಟನೇಯ ಸ್ಥಾನ ಪಡೆದು ಭಾರತ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ.[2] ಆದರೂ ಸಹ ಅಭಿವೃದ್ಧಿಯ ನಿಟ್ಟಿನಲ್ಲಿ ಈ ಯೋಜನೆಗಳನ್ನು ಹಾಕಿಕೊಂಡರು ಸಹ ಉದ್ಯೋಗಾವಕಾಶಗಳು ಬೆಳೆಯದೆ, ನಾಗರಿಕರ ಮೂಲಭೂತ ಅವಶ್ಯಕತೆಗಳನ್ನು ಪೂರ್ತಿಯಾಗಿ ಪೂರೈಸಲಾಗದೆ. ನಮ್ಮ ರಾಷ್ಟ್ರಬಡತನವನ್ನು ಇನ್ನೂ ಪರಿಹರಿಸಲಾಗದೆ ಕಳೆದ ೫೫ ವರ್ಷಗಳಿಂದಲೂ ಆ ಸಮಸ್ಯೆಯಿಂದ ಬಳಲುತ್ತಿರುವದನ್ನು ಕಾಣುತ್ತೇವೆ.[3]

ಇಂತಹ ಪರಿಸ್ಥಿತಿಯಲ್ಲಿ ಭಾರತದಲ್ಲಿನ ಗ್ರಾಮೀಣ ಮಟ್ಟದಲ್ಲಿ ಬಂಡವಾಳ ಹೂಡುವಿಕೆಗೆ ಹಾಗೂ ಜಾಗತಿಕ ಮಾರುಕಟ್ಟೆಗೆ ಹಳ್ಳಿಗಳನ್ನು ಗುರುತಿಸುವ ಕಾರ್ಯ ನಡೆಯಬೇಕಾಗಿದೆ. ಇಂತಹ ಪ್ರಯತ್ನಗಳನ್ನು ತಮ್ಮ ಯಶಸ್ಸನ್ನು ಕಳೆದುಕೊಳ್ಳುತ್ತಿರುವ ಹಿನ್ನಲೆಯಲ್ಲಿ ನಾಗರಿಕರು ನಗರ ಪ್ರದೇಶಗಳ ಬಗ್ಗೆ ತಮ್ಮ ಒಲವನ್ನು ಹರಿಸುತ್ತಿರುವ ಈ ನಿಟ್ಟಿನಲ್ಲಿ ಕಾನೂನಿನ ಅವಶ್ಯಕತೆಯ ಬಗ್ಗೆ ಚರ್ಚೆಗೀಡು ಮಾಡಿದೆ. ಸ್ವಾತಂತ್ರ್ಯ ನಂತರದಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದ ಈ ಪುರಸಭೆಗಳು ನಾಗರಿಕರ ಮೂಲಭೂತ ಸೌಲಭ್ಯಗಳನ್ನು ಪೂರೈಸುವಲ್ಲಿ ಇಲ್ಲಿನ ಅಭಿವೃದ್ಧಿ ರಾಜಕೀಯವು ಹಿಂದೇಟು ಹಾಕಿ, ನಂತರ ನಾಗರಿಕರ ಟೀಕೆಗಳಿಗೆ ಗುರಿಯಾಗಿ ತಮ್ಮ ಅಸ್ತಿತ್ವವನ್ನು ತಾವೇ ಕಳೆದುಕೊಳ್ಳುತ್ತವೆ ಏನೋ ಎಂಬ ಅಂಶ ಪ್ರಾಸವಾಗುತ್ತದೆ. ಇಂತಹ ಪುರಸಭೆಗಳಲ್ಲಿನ ಅಭಿವೃದ್ಧಿಯು ನಾಗರಿಕರ ಬೇಕು ಬೇಡಿಕೆಗಳಾದ ಕುಡಿಯುವ ನೀರು, ಉತ್ತಮ ರಸ್ತೆ, ಸಾರಿಗೆ ಸಂಪರ್ಕ, ಬೀದಿ ದೀಪದ ವ್ಯವಸ್ಥೆ, ಒಳಚರಂಡಿ ವ್ಯವಸ್ಥೆ, ಮಾರುಕಟ್ಟೆ, ಶಾಲೆಗಳು ಈ ಎಲ್ಲ ಸೌಲಭ್ಯಗಳನ್ನು ಪೂರೈಸದೇ ಇರುವುದರಿಂದ ಅಲ್ಲಿನ ಜನಜೀವನ ಅಸ್ತವ್ಯಸ್ತಗೊಂಡು ನಗರ ಪ್ರದೇಶವು ಅಭಿವೃದ್ಧಿ ಹಂತ ಕಾಣದೇ ಹಿಂದುಳಿಯಲು ಪ್ರಮುಖ ಕಾರಣಗಳಾಗಿವೆ. ಇಂತಹ ಪುರಸಭೆಗಳ ಬಗ್ಗೆ ಇರುವ ಒಳ್ಳೆಯ ಭಾವನೆ ಹೊರಟು ಹೋಗಿ ಪುರಸಭೆಯ ಬಗ್ಗೆ ನಿರುತ್ಸಾಹ ಭಾವನೆ ಬೆಳೆಯುತ್ತದೆ ಎಂಬುದು ಪುರಸಭೆಗಳು ಹಾಗೂ ಅಭಿವೃದ್ಧಿ ರಾಜಕೀಯಕ್ಕೆ ಸಂಬಂಧಿಸಿದ ವಿವಿಧ ಗ್ರಂಥಗಳಲ್ಲಿನ ಅಭಿಪ್ರಾಯವಾಗಿದೆ.[4]

ಇಂತಹ ಪರಿಸ್ಥಿತಿ ಇರುವಾಗಲೂ ಹಳ್ಳಿಗಳಿಂದ ಜನರು ನಗರಕ್ಕೆ ವಲಸೆ ಬರುತ್ತಿರುವುದು ನಗರಾಭಿವೃದ್ಧಿ ಮತ್ತು ಗ್ರಾಮೀಣ ಅಭಿವೃದ್ಧಿ ಕಾರ್ಯಚಟುವಟಿಕೆಗಳ ವಿರೋಧಿ ನೀತಿಗಳೆ ಪ್ರಮುಖ

2. ಡಾ ॥ ಸೂರ್ಯನಾಥ. ಯು.ಕಾಮತ್– 'ಕರ್ನಾಟಕ ಸ್ಟೇಟ್ ಗ್ಯಾಜಿಟಿಯರ್', ಉತ್ತರ ಕನ್ನಡ ಡಿಸ್ಟ್ರೀಕ್ಟ–1985, ಪು–150–153
3. ಅದೇ.
4. ಆರ್ .ಕೆ.ಸಪರೂ – 'ಡೆವಲಪ್‌ಮೆಂಟ್ ಎಡ್ಮಿನಿಸ್ಟ್ರೇಶನ್' ನವದೆಹಲಿ, ಸ್ಟರ್ಲಿಂಗ್ ಪಬ್ಲಿಕೇಶನ್,1996, ಪು–6.

ಕಾರಣವಾಗಿವೆ. ಇಂತಹ ವಿರೋಧ ನೀತಿಗಳು ಅಭಿವೃದ್ಧಿ ರಾಜಕೀಯಕ್ಕೆ ಪ್ರಾಮುಖ್ಯತೆ ನೀಡಿದ್ದರಿಂದ ಸಂವಿಧಾನದ ೭೪ ನೇಯ ತಿದ್ದುಪಡೆ ಮೇರೆಗೆ ನಗರ ಪುರಸಭೆಗಳನ್ನು ಸ್ಥಾಪಿಸಲಾಯಿತು. ಹೀಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ಅಧಿಕಾರವನ್ನು ಹಂಚಿಕೊಂಡ ಈ ಪುರಸಭೆಗಳು, ನಗರ ಸರ್ಕಾರಗಳಿಗೆ ಸಂಬಂಧಿಸಿದ ಅಧ್ಯಯನಗಳು, ಕಾರ್ಯಚಟುವಟಿಕೆಗಳ ವಿರೋಧಿ ನೀತಿಗಳೆ ಪ್ರಮುಖ ಕಾರಣಗಳಾಗಿವೆ. ಇಂತಹ ವಿರೋಧಿ ನೀತಿಗಳು ಅಭಿವೃದ್ಧಿ ರಾಜಕೀಯಕ್ಕೆ ಪ್ರಾಮುಖ್ಯತೆ ನೀಡಿದ್ದರಿಂದ ಸಂವಿಧಾನದ ೭೪ ನೇಯ ತಿದ್ದುಪಡೆ ಮೇರೆಗೆ ಪುರಸಭೆ ಅಥವಾ ನಗರಸಭೆ ಸ್ಥಾಪಿಸಲಾಯಿತು.

ಹೀಗೆ ಈ ಪುರಸಭೆಗಳು, ನಗರ ಸರ್ಕಾರಗಳಿಗೆ ಸಂಬಂಧಿಸಿದ ಅಧ್ಯಯನಗಳು, ಕಾರ್ಯಾಚರಣೆಗೆ ಸಂಬಂಧಿಸಿದ ಅಧ್ಯಯನಗಳು, ಭಾಗವಹಿಸುವಿಕೆಯ ಅಧ್ಯಯನಗಳು ನಡೆದಿವೆ ಎಂದಾದರೂ ಪುರಸಭೆ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನಗಳು ನಡೆಯುದೆ ಇರುವದರಿಂದ ಈ ಅಧ್ಯಯನವು ತನ್ನ ವಿಭಿನ್ನತೆಯಿಂದ ಹೆಚ್ಚಿನ ಸಂಶೋಧನಾ ಅಧ್ಯಯನಕ್ಕೆ ಮಾರ್ಪಾಡು ಮಾಡಿಕೊಟ್ಟಿದೆ. ಹಾಗೇಂದಾಕ್ಷಣ ಪುರಸಭೆಗೆ ಸಂಬಂಧಿಸಿದಂತೆ ವಿವಿಧ ಅಧ್ಯಯನಗಳು ಈಗಾಗಲೇ ನಡೆದಿವೆ ಎಂದಲ್ಲ. ಆದರೆ ಪುರಸಭೆ ಅಭಿವೃದ್ಧಿ ಕುರಿತಂತೆ, ಅದರಲ್ಲಿಯೂ ಅಭಿವೃದ್ಧಿಯ ಮೇಲೆ ಹೆಚ್ಚಿನ ಗಮನವನ್ನು ನೀಡಿರುವ ಅಧ್ಯಯನಗಳು ಬಹಳ ಕಡಿಮೆ ಇರುವ ಕಾರಣದಿಂದ ಪುರಸಭೆ ಅಭಿವೃದ್ಧಿ ಕುರಿತು " ಜಮಖಂಡಿ ಪುರಸಭೆಯ ಅಭಿವೃದ್ಧಿ" ಯನ್ನು ಅಧ್ಯಯನ ಕೇಂದ್ರವಾಗಿ ಪರಿಗಣನೆಗೆ ತೆಗೆದುಕೊಳ್ಳಲಾಯಿತು.

## ೨. ಅಧ್ಯಂಯನದ ಉದ್ದೇಶಗಳು :

ಸ್ಥಳೀಯ ಸರ್ಕಾರಗಳಲ್ಲಿ ಒಂದು ಪಂಗಡವೆನಿಸಿರುವ ಪುರಸಭೆಗಳು ತನ್ನ ಜನರ ಅಳಿವು ಮತ್ತು ಉಳಿವು ಅಸ್ತಿತ್ವ ಯಶಸ್ಸನ್ನು ಮುಂದುವರೆಸಿಕೊಂಡು ಹೋಗಬೇಕಾದಲ್ಲಿ ಅಭಿವೃದ್ಧಿಯು ಪ್ರಮುಖ ಪಾತ್ರ ವಹಿಸುತ್ತದೆ. ಇಂತಹ ಪ್ರಮುಖ ಅಂಶವನ್ನು ಹೊಂದಿರುವ ಹಲವಾರು ಸಂಶೊಧನಾ ಅಧ್ಯಯನಗಳು ಮತ್ತು ಸಂಶೋಧಕರು ಹಾಗೂ ಈ ಪುರಸಭೆಗಳ ಬಗ್ಗೆ ಅನೇಕ ವಿದ್ವಾಂಸರು ತಮ್ಮ ಅರ್ಥವನ್ನು ವಿವರಿಸಿದರೂ, ಮೂಲತಃ ಇವು ಜನರ ಸ್ವಯಂ ಆಸೆಯಿಂದ ರಚಿತವಾದ ಜನರಪರ ಸಂಸ್ಥೆಗಳೆಂದು ಹೇಳಲು ಸಾಧ್ಯವಾಗಿರುವ ಈ ಹಿನ್ನಲೆಯಲ್ಲಿ ಅಸ್ತಿತ್ವಕ್ಕೆ ಬಂದ ಇಂತಹ ಪುರಸಭೆಗಳ ಅಭಿವೃದ್ಧಿಯನ್ನು ಜನಪರ ಕಾರ್ಯಕ್ರಮವಾಗಿ ಹಮ್ಮಿಕೊಳ್ಳುವುದೋ ಎಂಬ ವಿಚಾರದಲ್ಲಿ ಪರಿಶೀಲಿಸುವ ಸಲುವಾಗಿ ಈ ಅಧ್ಯಯನ ಕೈಗೊಳ್ಳಲಾಗಿದೆ.

ಈ ಅಧ್ಯಯನದ ಉದ್ದೇಶವನ್ನು ಈಡೇರಿಸುವ ಸಲುವಾಗಿ ಅನೌಪಚಾರಿಕ ಚರ್ಚೆ, ವಿಚಾರ ವಿನಿಮಯ, ನೌಕರ ಶಾಹಿ, ಪ್ರಮುಖವಾಗಿ ಜನಸಾಮಾನ್ಯರು, ಎಲ್ಲಕ್ಕಿಂತ ಮಿಗಿಲಾಗಿ ಈ ಪುರಸಭೆಯ ಅಧ್ಯಯನದ ಪರಿಮಿತಿಯಲ್ಲಿ ತೆಗೆದುಕೊಂಡು, ಈ ಉದ್ದೇಶದ ಸಾಧನೆಗಾಗಿ ಸೈದ್ಧಾಂತಿಕ ಸಂಶೋಧನಾ ಮಾರ್ಗಗಳನ್ನು ಹಮ್ಮಿಕೊಂಡು ಅಧ್ಯಯನದ ಉದ್ದೇಶದ ಸಾಧನೆಯೆಡೆಗೆ ಪ್ರಯತ್ನ ಮಾಡಲಾಗಿದೆ.

ಈ ಅಧ್ಯಯನವು ಪುರಸಭೆಯ ಅಭಿವೃದ್ಧಿ ಹಂತದ ಕಾರ್ಯವನ್ನು ವಿಶ್ಲೇಷಿಸುವ ಸಲುವಾಗಿ ಮಾಡಲಾಗಿದೆ. ಇಂತಹ ಕಾರ್ಯವನ್ನು ಸಂಶೋಧಕನಿಗೆ ಪರಿಚಯ ಪ್ರದೇಶವಾಗಿದ್ದ "ಜಮಖಂಡಿ ಪುರಸಭೆ" ಯನ್ನು ಕೇಂದ್ರವಾಗಿರಿಸಿಕೊಂಡು ಈ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧) ಪುರಸಭೆಯ ಐತಿಹಾಸಿಕ ಹಿನ್ನೆಲೆ ತಿಳಿಯುವುದು.

೨) ಪುರಸಭೆ ಮೂಲ ಸೌಕರ್ಯಗಳ ಕುರಿತು ಅಧ್ಯಯನ ಮಾಡುವುದು.

೩) ಪುರಸಭೆಯ ಆಯ-ವ್ಯಯ ಅಧ್ಯಯನ ಮಾಡುವುದು.

೪) ಪುರಸಭೆಯು ಜನರ ಸಮಸ್ಯೆಗಳಿಗೆ ಹೇಗೆ ಪ್ರತಿಕ್ರೀಯಿಸುತ್ತದೆ ಎಂಬುದನ್ನು ತಿಳಿಯುವುದು.

೫) ಸ್ಥಳೀಯರಿಗೆ ಪುರಸಭೆಯ ಯೋಜನೆಗಳ ಬಗ್ಗೆ ಇರುವ ಅರಿವನ್ನು ಗುರುತಿಸುವುದು

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದಕ್ಕೆ ಹೊಂದಿಕೊಳ್ಳುವ ಹಾಗೂ ಇಂತಹ ಅಧ್ಯಯನಗಳು ಈಗಾಗಲೇ ನಡೆದಿವೆಯೇ, ನಡೆದಿದ್ದರೆ ಯಾವ ಪ್ರದೇಶದಲ್ಲಿ ನಡೆದಿವೆ, ನಡೆದಿಲ್ಲವಾದಲ್ಲಿ ಈ ಅಧ್ಯಯನ ಹೇಗೆ ಹೊಸದಾದ ಹಾಗೂ ಈ ವಿಚಾರಧಾರೆಯಲ್ಲಿ ಉಳಿದಿರುವ ಅಂತರವನ್ನು ಹೇಗೆ ತುಂಬಿಸಿ ಕೊಡುತ್ತದೆ ಎಂಬ ಅಂಶವನ್ನು ಮನದಟ್ಟು ಮಾಡಿಕೊಳ್ಳಲು ಸಾಹಿತ್ಯದ ಪುನರಾವಲೋಕನ ಹಾಗೂ ವಿಮರ್ಶೆಯನ್ನು ಸಹ ಮಾಡಲಾಗಿದೆ.

## ೩. ಅಧ್ಯಯನದ ಮಹತ್ವ :

ಜಮಖಂಡಿ ಪುರಸಭೆಯು ನನಗೆ ಚಿರಪರಿಚಿತವಾದ ಪ್ರದೇಶವಾಗಿದ್ದು, ನನಗೆ ಸಂಶೋಧನೆಯಲ್ಲಿ ಆ ಪುರಸಭೆಯ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿ ತಿಳಿದುಕೊಳ್ಳಬೇಕೆಂಬ ಆಸೆಯಿಂದ, ಅಂದರೆ ಪುರಸಭೆಯ ಆಡಳಿತ, ಅದರ ಕಾರ್ಯಗಳು, ಅದರ ಸಿಬ್ಬಂಧಿ, ಸದಸ್ಯರ ನಿಯಮಾವಳಿಗಳು ಆಗಿರಬಹುದು. ಪಟ್ಟಣಗಳ ಅಭಿವೃದ್ಧಿಯಲ್ಲಿ ಪುರಸಭೆಗಳು ಯಾವ ಯಾವ ಕಾರ್ಯಗಳನ್ನು ನಿರ್ವಹಿಸುತ್ತವೆ ಆ ಕಾರ್ಯಗಳಿಗೆ ಹಣದ ಮೂಲ ಯಾವುದು, ಆ ಹಣವನ್ನು ಯಾರು ಆ ಕಾರ್ಯಗಳಿಗೆ ಬಳಸುತ್ತಾರೆ ಪುರಸಭೆ ಪೌರಾಯುಕ್ತರ, ಸದಸ್ಯರ ಕೆಲಸ ಕಾರ್ಯಗಳೇನು ಹೀಗೆ ಹತ್ತು ಹಲವಾರು ಕುತೂಹಲಕಾರಿ ವಿಷಯಗಳನ್ನು ತಿಳಿಯುವದಕ್ಕಾಗಿ ಮತ್ತು ಈಗಾಗಲೇ ನಮ್ಮ ರಾಜ್ಯದಲ್ಲಿಯ ಪುರಸಭೆಗಳ ಮೇಲೆ ಹಲವಾರು ಸಂಶೋಧನೆಗಳು ನಡೆದಿದ್ದರು ಸಹ ಅವು ರಾಜಕೀಯ ವಿಷಯ ಕುರಿತು, ಆಡಳಿತ ಕುರಿತು ನಡಿದಿವೆ. ಆದರೆ ಅಭಿವೃದ್ಧಿಯ ವಿಷಯ ಕುರಿತು ಸಂಶೋಧನೆಗಳು ನಡೆದಿರುವುದು ತೀರಾ ವಿರಳ. ಹಾಗಾಗಿ ನಾನು "ಜಮಖಂಡಿ ಪುರಸಭೆಯ ಅಭಿವೃದ್ಧಿಯ ಅಧ್ಯಯನವನ್ನು" ಕೇಂದ್ರವನ್ನಾಗಿಟ್ಟುಕೊಂಡು ಸಂಶೋಧನೆಗೆ ಆಯ್ಕೆ ಮಾಡಿಕೊಂಡಿದ್ದೇನೆ.

## ೪. ಅಧ್ಯಯನದ ವಿಧಾನ :

ಸಾಮಾಜಿಕ ಸಂಶೋಧನಾ ವಿಧಾನದಲ್ಲಿ ವೈಜ್ಞಾನಿಕ ಅಂಶಗಳ ಅಭಿವೃದ್ಧಿ ಸಮಸ್ಯೆಗೆ ಸಮರ್ಪಕ ಉತ್ತರದೊರೆಯದಿರುವ ಸಂದರ್ಭವಿದ್ದರೂ ಸಮಸ್ಯೆಗೆ ತೀರ ಹತ್ತಿರವಾದಂತಹ ಹಾಗೂ ಈ ಅಭಿವೃದ್ಧಿಪರ

ಸಮಸ್ಯೆಗೆ ಪರಿಹಾರವನ್ನು ಹುಡುಕಲು ವೈಜ್ಞಾನಿಕ ಅಂಶಗಳನ್ನು ಈ ಅಧ್ಯಯನದಲ್ಲಿ ಅಳವಡಿಸಲಾಗಿದೆ. ಸಿದ್ಧಾಂತಗಳ ಆಧಾರದ ಮೇಲೆ ಪುರಸಭೆಗಳ ಅಭಿವೃದ್ಧಿ ತಿಳಿಯುವ ಸಲುವಾಗಿ ಸಮೀಕ್ಷೆ ಆಧಾರದ ಸಂಶೋಧನೆಗಳನ್ನು ನಡೆಸಿ ಪ್ರಶ್ನಾವಳಿ ಸಂದರ್ಶನದ ತಂತ್ರಗಳನ್ನು ಇಲ್ಲಿ ಬಳಸಲಾಗಿದೆ. ಅಂಕಿ-ಸಂಖ್ಯೆಗಳ ವಿಶ್ಲೇಷಣೆ ಮೂಲಕ ಸರಳ ಶೇಕಡಾವಾರು ಪದ್ಧತಿಯಿಂದ ಸಮಸ್ಯೆಗಳನ್ನು ವೈಜ್ಞಾನಿಕ ಉತ್ತರಗಳನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ.

ಇಂತಹ ಕಾರ್ಯಗಳನ್ನು ಎಸಗುವಲ್ಲಿ ಭಾಗವಹಿಸುವಿಕೆಯ ಪ್ರಾಮುಖ್ಯತೆಯನ್ನು ಕಂಡುಕೊಂಡ ಕಾರಣ ಅವಲೋಕನ ವಿಧಾನವನ್ನು ಹಾಗೂ ಪರಸ್ಪರ ವರ್ತನಾ ವಿಧಾನ ಅಧ್ಯಯನಗಳನ್ನು ಅಳವಡಿಸಿಕೊಂಡು ಜಮಖಂಡಿ ಪುರಸಭೆಯ ರಾಜಕಾರಣಿಗಳು, ಮಧ್ಯಮ ಪ್ರಮಾಣದ ರಾಜಕಾರಣಿಗಳು ಹಾಗೂ ಅಧಿಕಾರ ಚುಕ್ಕಾಣಿ ಹಿಡಿದ ರಾಜಕಾರಣಿಗಳನ್ನು ತೀಕ್ಷ್ಣವಾದ ಅಧ್ಯಯನಕ್ಕೆ ಗುರುತಿಸಲಾಗಿದೆ. ಹೀಗೆ ಮಾಡುವಲ್ಲಿ ಸಣ್ಣ ಪ್ರಮಾಣದ ರಾಜಕಾರಣಿಗಳೆಂದರೆ ಯಾರು ಜನರ ನಡುವೆ ಇದ್ದು, ಅಧಿಕಾರಿಗಳೊಂದಿಗೆ ಮತ್ತು ರಾಜಕಾರಣಿಗಳೊಂದಿಗೆ ಸಣ್ಣಪುಟ್ಟ ಕಾರ್ಯಗಳನ್ನು ಎಸಗುವಲ್ಲಿ ಸಹಾಯ ಮಾಡುತ್ತಾರೆ ಅವರುಗಳನ್ನು ಗುರುತಿಸಲಾಯಿತು. ಮಂದಹಿತದ ರಾಜಕಾರಣಿಗಳು ಎಂಬಲ್ಲಿ ಇವರು ವೃತ್ತಿಯಲ್ಲಿ ಬೇರೆ ಕಾರ್ಯಗಳನ್ನು ಮಾಡುತ್ತಿದ್ದು, ರಾಜ್ಯ ಮಟ್ಟದಲ್ಲಿ ಮತ್ತು ಕೇಂದ್ರ ಸರ್ಕಾರದ ಮಟ್ಟದಲ್ಲಿ ಶಾಸಕರುಗಳನ್ನು ಸಮಾಜದ ಕಾರ್ಯಗಳಿಗೆ ಬರಮಾಡಿಕೊಳ್ಳುವ ಹಾಗೂ ಸ್ವಯಂಸೇವಾ ಸಂಘಟನೆಗಳಲ್ಲಿ ಹಾಗೂ ಸ್ಥಳೀಯ ಸೇವಾ ಮಟ್ಟದಲ್ಲಿ ಹಾಗೂ ಜನರಿಗೆ ನಾಯಕತ್ವವನ್ನು ನೀಡುವರೆಂದು ಗುರುತಿಸಲಾಯಿತು.

ಮೂರನೆಯದಾಗಿ ಯಾರು ಅಧಿಕಾರದ ಚುಕ್ಕಾಣಿಯನ್ನು ಹಿಡಿದಿರುವರೋ ಅವರನ್ನು ಗುರುತಿಸಲಾಯಿತು. ಹೀಗೆ ಗುರುತಿಸಿದ ನಂತರ ಜನರ ಸಂಭಾಷಣೆ ವಿಚಾರ ವಿನಿಮಯಗಳೊಂದಿಗೆ ಇಲ್ಲಿ ಇರುವ ಪಕ್ಷಗಳ ಮತ್ತು ಪಕ್ಷಾತೀತ ರಾಜಕಾರಣಿಗಳ ನಡುವಿನ ಮುಂಜಾನೆ ಮತ್ತು ಮುಸ್ಸಂಜೆ ಹಾಗೂ ರಾತ್ರಿಯ ಸಭೆಗಳಲ್ಲಿ ಭಾಗವಹಿಸಿ ವಿಚಾರ ವಿನಿಮಯದ ವಿಷಯಗಳನ್ನು ಪಟ್ಟಿ ಮಾಡಿ, ಈ ಬಗ್ಗೆ ಜನರ ಅಭಿಪ್ರಾಯವನ್ನು ಸುಧಾರಿಸಿ ಈ ಅಧ್ಯಯನಕ್ಕೆ ಬೇಕಾದ ಪ್ರಾಥಮಿಕ ಅಂದರೆ ಸರ್ಕಾರಿ ಮತ್ತು ಸರ್ಕಾರದಿಂದ ಉತ್ಪನ್ನಗೊಂಡ ದತ್ತಾಂಶಗಳು, ರಿಪೋರ್ಟ್‌ಗಳು, ಇವುಗಳನ್ನು ಅಧ್ಯಯನ ಮಾಡಲಾಯಿತು. ಹಾಗೆಯೇ ಮಾಧ್ಯಮಿಕ ಮಾಹಿತಿಗಳಾದ ಪುರಸಭೆಗೆ ಸಂಬಂಧಪಟ್ಟ ಬರಹಗಳು, ಪುರಸಭೆ ಬಗ್ಗೆ ಇತರೇ ಪುಸ್ತಕಗಳಲ್ಲಿ ಪ್ರಸ್ತುತ ಪಡಿಸಿರುವ ವಿಷಯಗಳನ್ನು ಜರ್ನಲ್‌ಗಳನ್ನು ಅವಲೋಕಿಸಲಾಯಿತು. ಈ ರೀತಿಯಾಗಿ ವಿವಿಧ ಮಾಧ್ಯಮಗಳಿಂದ ಮತ್ತು ವೈಜ್ಞಾನಿಕ ಹಾಗೂ ವಿವಿಧ ಸಂಶೋಧನಾ ವಿಧಾನದಿಂದ ಮಾಹಿತಿ ಸಂಗ್ರಹಣ ಮಾಡಲಾಯಿತು. ಇಂತಹ ಸಂಗ್ರಹಣ ಮಾಡಿದ ಮಾಹಿತಿಯನ್ನು ಕಂಪ್ಯೂಟರ್ ಮೂಲಕ ಹಾಗೂ ಅಂಕಿ-ಅಂಶಗಳ ಆಧಾರದ ಮೇಲೆ ವಿಶ್ಲೇಷಿಸಿ, ಸಾಹಿತ್ಯದ ವಿಮರ್ಶೆ, ವಿಶ್ಲೇಷಣೆ,ನಡೆಸಿದ ಅಧ್ಯಯನದ ವಿಧಾನವೇ ಈ ಪ್ರಬಂಧವಾಗಿದೆ.

ಜಮಖಂಡಿ ಪುರಸಭೆಯು ಸುಮಾರು ೬೪.೨೮೪ ರಷ್ಟು ಜನಸಂಖ್ಯೆಯಲ್ಲಿ ನಮ್ಮ ಅಧ್ಯಯನಕ್ಕೆ ಸುಮಾರು ೧೩೦ ರಷ್ಟು ಜನರನ್ನು ತೆಗೆದುಕೊಂಡು, ಅನಿರ್ಧಿಷ್ಟ ಹಾಗೂ ಚದುರಿದ ಆಯ್ಕೆ ಆಧಾರದ ಮೇಲೆ ಆಯ್ದುಕೊಂಡು ನಾಲ್ಕು ವರ್ಗಗಳಾಗಿ ರಚಿಸಿ ಸುಮಾರು ೧೦೦ ಜನರನ್ನು ವರ್ಗ–೧ ರಲ್ಲಿ(ನಗರದ ನಾಗರಿಕರು) ಮತ್ತು ೧೨ ಜನರನ್ನು ವರ್ಗ ೨ರಲ್ಲಿ (ಪುರಸಭೆ ಸದಸ್ಯರು) ಹಾಗೂ ವರ್ಗ ೩ ರಲ್ಲಿ ೦೬ ಜನರನ್ನು(ರಾಜಕೀಯ ಮುಖಂಡರು) ಅದೇ ರೀತಿ ವರ್ಗ ೪ರಲ್ಲಿ ೧೨ ಜನರನ್ನು (ನೌಕರದಾರರು) ಹೀಗೆ ನಾಲ್ಕು ವರ್ಗಗಳನ್ನಾಗಿ ವಿಂಡಿಸಲಾಗಿದೆ. ಹೀಗೆ ವಿಭಾಗಗಳನ್ನು ಮಾಡಿ ಪ್ರಶ್ನಾವಳಿ ಸಮೀಕ್ಷೆಯ ಮೂಲಕ ಮಾಹಿತಿಯನ್ನು ಸಂಗ್ರಹಿಸಿಕೊಂಡು ಸರಳ ಶೇಕಡಾವಾರು ಆಧಾರದ ಮೇಲೆ ಅಂಕಿ–ಸಂಖ್ಯೆಗಳನ್ನು ಅಧ್ಯಯನಕ್ಕಾಗಿ ಆಯ್ದುಕೊಂಡ ಜನರ ಸಂಖ್ಯೆಯನ್ನು ಈ ಕೆಳಗಿನ ರೇಖಾ ಚಿತ್ರದ ಮೂಲಕ ತಿಳಿದುಕೊಳ್ಳಬಹುದು.



೫. ಅಧ್ಯಯನದ ಇತಿಮಿತಿಗಳು ಅಥವಾ ವ್ಯಾಪ್ತಿ :

ನಮ್ಮ ಸಂಶೋಧನೆಯು ಕಾಲ ಮಿತಿಗೆ ಅನುಗುಣವಾಗಿ ಈ ಕೆಳಗಿನ ಹಾಗೆ ಇತಿಮಿತಿಗಳಿಗೆ ಒಳಪಟ್ಟಿದೆ. ನಮ್ಮ ಸಂಶೋಧನೆಯು ಜಮಖಂಡಿ ಪುರಸಭೆಗೆ ಸೀಮಿತವಾಗಿದ್ದು. ಪುರಸಭೆಯು ನಾಗರಿಕರನ್ನು ಒಳಗೊಂಡಿದೆ.ಸಂಶೋಧನೆಯಲ್ಲಿ ಪುರಸಭೆಯ ೩೦ ಜನ ಸಿಬ್ಬಂದಿ ಹಾಗೂ ಸದಸ್ಯರನ್ನು ಆಯ್ಕೆ ಮಾಡಿ ಕೊಂಡು ಪುರಸಭೆಯ ಯೋಜನೆಗಳಾವವು, ಅವುಗಳನ್ನು ಫಲಾನುಭವಿಗಳಿಗೆ ಯಾವ ರೀತಿ ಮುಟ್ಟಿಸಲಾಗಿದೆ ಎಂಬ ಸಮೀಕ್ಷೆ ಮಾಡಲಾಗಿದೆ ಮತ್ತು ೧೦೦ ಜನ ಫಲಾನುಭವಿಗಳನ್ನು ತೆಗೆದುಕೊಂಡು ಪುರಸಭೆಯ ಯೋಜನೆಗಳ ಅನುಷ್ಠಾನದ ಬಗ್ಗೆ ಸಮೀಕ್ಷೆ ಮಾಡಲಾಯಿತು. ಈ ಸಂಶೋಧನೆಯು ಆಯ-ವ್ಯಯ ಅಧ್ಯಯನ ಮಾಡುವಂತಹ ಸಂದರ್ಭದಲ್ಲಿ ಐದು ವರ್ಷದ ಅಂಕಿ- ಅಂಶಗಳನ್ನ ಮಾತ್ರ ಕಲೆ ಹಾಕಲಾಗಿದೆ.

## ಅಧ್ಯಯನದ ವಿನ್ಯಾಸ :

### ಅಧ್ಯಾಯ ಒಂದು :

ಈ ಸಂಶೋಧನೆಯಲ್ಲಿ ಅಧ್ಯಯನದ ವಿನ್ಯಾಸವನ್ನು ಕೆಳಕಂಡಂತೆ ಹಾಕಿಕೊಳ್ಳಲಾಗಿದೆ. ಅಧ್ಯಾಯ ಒಂದು ಇದರಲ್ಲಿ ಜಮಖಂಡಿ ಪುರಸಭೆ ಸಂಶೋಧನೆಯ ಅಧ್ಯಯನದ ಉದ್ದೇಶಗಳು, ಮಹತ್ವ, ವಿಧಾನ, ವ್ಯಾಪ್ತಿ,ಇತಿಮಿತಿಗಳನ್ನು ಒಳಗೊಂಡಿದೆ.

### ಅಧ್ಯಾಯ ಎರಡು :

ಸಾಹಿತ್ಯದ ಪುನರಾವಲೋಕನ ಇದರಲ್ಲಿ ಇದು ವರೆಗೆ ಪುರಸಭೆಗಳ ಮೇಲೆ ಆದಂತಹ ಸಂಶೋಧನಾ ಸಾಹಿತ್ಯದ ಪುನರಾವಲೋಕನ ಮಾಡಲಾಗಿದೆ.

### ಅಧ್ಯಾಯ ಮೂರು :

ಅ. ಪುರಸಭೆ ಐತಿಹಾಸಿಕ ಹಿನ್ನೆಲೆ ಇದರಲ್ಲಿ ಜಮಖಂಡಿ ಪುರಸಭೆಯ ಬೆಳವಣಿಗೆ ಮತ್ತು ವಿಕಾಸ, ಭೌಗೋಳಿಕ ಮೆರೆ, ನಗರದ ಅಕ್ಷಾಂಶ ಮತ್ತು ರೇಖಾಂಶ, ಜಮಖಂಡಿಯ ನಾಮ ವಿವೇಚನೆ ಮತ್ತು ಐತಿಹಾಸಿಕ ಹಿನ್ನೆಲೆಯ ವಿಷಯಗಳನ್ನು ಒಳಗೊಂಡಿದೆ.

ಬ. ಜಮಖಂಡಿ ಪುರಸಭೆಯ ಆಡಳಿತ ವ್ಯವಸ್ಥೆ ಒಂದು ನೋಟ ಇದರಲ್ಲಿ ಚುನಾವಣಾ ಪದ್ಧತಿ, ಪುರಸಭೆಗಳು, ಪುರಸಭೆಯ ಸದಸ್ಯರ ಅಧಿಕಾರಗಳು ಮತ್ತು ಕಾರ್ಯಗಳು, ಪುರಸಭೆಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಅಧಿಕಾರ ಮತ್ತು ಕಾರ್ಯಗಳು, ಪುರಸಭೆಯ ಅಧಿಕಾರ ಮತ್ತು ಕಾರ್ಯಗಳು, ಪುರಸಭೆಯ ಮುಖ್ಯಾಧಿಕಾರಿಯ ಅಧಿಕಾರ ಮತ್ತು ಕಾರ್ಯಗಳು. ಸಮಾರೋಪಗಳನ್ನು ಒಳಗೊಂಡಿದೆ.

### ಅಧ್ಯಾಯ ನಾಲ್ಕು

ಅಭಿವೃದ್ಧಿ ಯೋಜನೆಗಳ ಆಯ-ವ್ಯಯ ನಿರ್ವಹಣೆ ಇದರಲ್ಲಿ ಆಯ-ವ್ಯಯದ ಅರ್ಥ, ಆಯ-ವ್ಯಯ ಮಂಡಣೆಯ ಅವಧಿ,ಆಯ-ವ್ಯಯ ಪ್ರಗತಿಯ ವಿಶ್ಲೇಷಣೆ. ಪುರಸಭೆ ವಿವಿಧ ಯೋಜನೆ ಅಡಿಯಲ್ಲಿ ಆಯ-ವ್ಯಯದ ಕುರಿತು ಒಂದು ಅಧ್ಯಯನದ ವಿಷಯಗಳನ್ನು ಒಳಗೊಂಡಿದೆ.

### ಅಧ್ಯಾಯ ಐದು :

ಸಮೀಕ್ಷೆ – ಇದರಲ್ಲಿ ಪುರಸಭೆಯ ಸಿಬ್ಬಂಧಿ ಹಾಗೂ ಸದಸ್ಯರ ಸಮೀಕ್ಷೆಯು ಪುರಸಭೆಯ ಯೋಜನೆಗಳ ಕುರಿತು ಇದೆ.ಹಾಗೂ ಫಲಾನುಭವಿಗಳ ಸಮೀಕ್ಷೆಯಲ್ಲಿ ಪುರಸಭೆಯ ಯೋಜನೆಗಳು ಅನುಷ್ಠಾನಗೊಂಡಿದ್ದರ ಬಗ್ಗೆ ಸಮೀಕ್ಷೆಗಳ ವಿವರಣೆಯನ್ನು ಒಳಗೊಂಡಿದೆ.

### ಅಧ್ಯಾಯ ಆರು

ಸಮಾರೋಪ ಇದರಲ್ಲಿ ಅಧ್ಯಯನದಲ್ಲಿ ಕಂಡುಕೊಂಡಂತಹ ಫಲಿತಗಳು ಹಾಗೂ ಸಲಹೆಗಳನ್ನು ಒಳಗೊಂಡಿದೆ.

* * *

ಅಧ್ಯಾಯ - ೨

# ಸಾಹಿತ್ಯದ ಪುನರಾವಲೋಕನ

೧. ಪೀಠಿಕೆ

೨. ಸಾಹಿತ್ಯದ ಪುನರಾವಲೋಕನ

೩. ಸಮಾರೋಪ

ಅಧ್ಯಾಯ – ೨

# ಸಾಹಿತ್ಯದ ಪುನರಾವಲೋಕನ

೧. ಪೀಠಿಕೆ :

ಪುರಸಭೆ ಅಭಿವೃದ್ಧಿ ಅಧ್ಯಯನವು ಹೊಸದಾದ ಆಯಾಮವನ್ನು ಹೊಂದಿರುವುದರಿಂದ ಹಾಗೂ ಪಂಚಾಯತ್‌ರಾಜ್ ವ್ಯವಸ್ಥೆಯಂತೆ ಇಂದಿಗೂ ಈ ನಿಟ್ಟಿನಲ್ಲಿ ಹೆಚ್ಚಿನ ಅಧ್ಯಯನ ನಡೆದಿರದ ಸಂದರ್ಭದಲ್ಲಿ  ನಗರಾಭಿವೃದ್ಧಿ ಬಗ್ಗೆ ನಗರಾಭಿವೃದ್ಧಿಯ ಹಿನ್ನಲೆಯಲ್ಲಿ ಪುರಸಭೆಗಳ ಅಭಿವೃದ್ಧಿ ಪಾತ್ರವನ್ನು ಪರಾಮರ್ಶಿಸಲು ನಡೆದಿರುವ ಈ ಪ್ರಯತ್ನ ಅಧ್ಯಯನ ಪರಿಮಿತಿಯಲ್ಲಿ ಬರುವ ಪುರಸಭೆಗಳ ಹಿನ್ನಲೆ, ಆಡಳಿತ ವ್ಯವಸ್ಥೆ, ಆಯ–ವ್ಯಯ, ಫಲಾನುಭವಿಗಳ ಸಮೀಕ್ಷೆ ಹಾಗೂ ಸಾಹಿತ್ಯದ ಪುನರಾವಲೋಕನ ಮಾಡಿನೋಡಲಾಗಿ ಇಂತಹ ಅಧ್ಯನವು ಎಷ್ಟರ ಮಟ್ಟಿಗೆ ಹಳೆಯದಾಗಿದೆ ಎಂದು ಪರೀಕ್ಷಿಸಿದಾಗ ಈ ವಿಷಯವನ್ನು ಕುರಿತು ಅಧ್ಯಯನಗಳು ನಡೆದಿದ್ದರೂ, ಇಂತಹ ಅಧ್ಯನಗಳು ಅಭಿವೃದ್ಧಿ ಅಧ್ಯಯನದಲ್ಲಿ ಬಹಳಷ್ಟು ಸಂಕೀರ್ಣಗೊಂಡ ಅಧ್ಯಯನವಾಗಿ ಹಾಗೂ ಆಳವಾದಂತಹ ಸಂಶೋಧನೆಗಳು ಈ ವಿಷಯ ಕುರಿತು ನಡೆದಿಲ್ಲ ಎಂಬುದನ್ನು ಎತ್ತಿತೋರಿಸಿದೆ ಎಂಬ ಈ ಮಾತುನ್ನು ಈ ಸಂದರ್ಭದಲ್ಲಿ ಹೇಳುವುದು ಹೆಚ್ಚು ಪ್ರಸ್ತುತವಾಗಿದೆ. ಆದ್ದರಿಂದ ಇಲ್ಲಿ ಹಲವಾರು ಸಾಹಿತ್ಯದ ಪುನರಾವಲೋಕನವನ್ನು ಇಲ್ಲಿ ಮಾಡಲಾಗಿದೆ.

ಅಲಿ ಆಶ್ರಫ್ರವರ "ಗವರ್ನಮೆಂಟ್ ಅಂಡ ಪೊಲಿಟಿಕ್ಸ್ ಆಫ್ ಬಿಗ್ ಸಿಟಿಸ್"[೧] ಎಂಬ ಪುಸ್ತಕವು ನಗರ ಸರ್ಕಾರದ ಬೆಳವಣಿಗೆಗೆ ತೊಂದರೆದಾಯಕವಾದ ಅಂಶಗಳ ಬಗ್ಗೆ ವಿವರಿಸುವುದು ಕಂಡುಬರುತ್ತದೆ. ಹರಿಂಗ್ಟನ್ ಜೆ.ಬ್ರೈಸ್ರಸ್ ರವರ "ಅರ್ಬನ್ ಗವರ್ನರ್ಸ ಆ್ಯಂಡ್ ಮೈನಾರಿಟಿಸ್"[೨] ಪುಸ್ತಕವು ನಗರ ಸರ್ಕಾರಕ್ಕೆ ಸಂಬಂಧಿಸಿದ್ದು ಇದು ನಗರದ ಅಲ್ಪ ಸಂಖ್ಯಾತರ ಬಗ್ಗೆ ಹಾಗೂ ನಗರದ ರಚನೆ ಬಗ್ಗೆ, ಮೇಯರ್ ರವರ ಕಾರ್ಯವೈಖರಿ, ನಗರದ ಹಣಕಾಸು ಮತ್ತು ನಗರ ಸಭೆ ಬೆಳವಣಿಗೆ ಬಗ್ಗೆ ಹಾಗೂ ನಗರ ಸಭೆ ಚುನಾವಣೆಯಲ್ಲಿ ಜನತೆಯು ಭಾಗವಹಿಸುವಿಕೆಯ ಕುರಿತಾಗಿ ವಿವರಿಸಲಾಗಿದೆ. "ಎಡ್ವರ್ಡ್ ಸಿಬ್ಲ್ರಾಫಿಲ್ಡ್ ರವರ ಅರ್ಬನ್ ಗವರ್ನಮೆಂಟ"[೩] ಪುಸ್ತಕವು ನಗರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ನಡುವಿನ ಸಂಬಂಧ ಕುರಿತು ಹಾಗೂ ನಗರ ಸರ್ಕಾರದ ಆಡಳಿತ ಮತ್ತು ರಾಜಕೀಯ ಕುರಿತಾಗಿ ವಿಶ್ಲೇಷಣೆಯನ್ನು ನೀಡುತ್ತದೆ. ಶ್ರೀ ಆರ್.ಟಿ. ಜಂಗಮ್ ಮತ್ತು ಬಿ.ವ್ಹಿ ಶರ್ಮಾರವರ "ಲೀಡರಶಿಪ್ ಇನ್ ಅರ್ಬನ್ ಗವರ್ನಮೆಂಟ"[೪] ಪುಸ್ತಕವು ನಗರ ವ್ಯವಸ್ಥೆ ಹಾಗೂ ಸಂಘಟನೆ ಮತ್ತು ಜನರ ರಾಜಕೀಯ, ಆರ್ಥಿಕ, ಸಾಮಾಜಿಕ ಹಿನ್ನಲೆ ಹಾಗೂ ನಾಯಕತ್ವದ ಬಗ್ಗೆ ವಿವರಿಸಿದ್ದಾರೆ.

ಶ್ರೀ ಮೋಹಿತ್ ಭಟ್ಟಾಚಾರ್ಯರವರ "ಮೆಜರ್‌ಮೆಂಟ ಆಫ್ ಅರ್ಬನ್ ಗವರ್ನಮೆಂಟ ಇನ್ ಇಂಡಿಯಾ"[೫] ಪುಸ್ತಕವು ನಗರ ಸಭೆಯ ರಚನೆ ಸ್ವರೂಪ, ವ್ಯವಸ್ಥೆ,ನಗರಾಡಳಿತ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ನಗರ ಸರ್ಕಾರಕ್ಕೆ ಸಹಾಯ ಕುರಿತು, ನಗರದ ಯೋಜನೆ, ನಗರೀಕರಣ ನಗರದ ಅಭಿವೃದ್ಧಿ ಕುರಿತು ವಿವರಣೆ ನೀಡುತ್ತದೆ. "ಬಾಂಬೆ ಡಿಸ್ಟ್ರಿಕ್ಟ ಮುನಸಿಪಲ್ ಆಕ್ಟ ಹಿನ್ನೆಲೆಯಲ್ಲಿ ರಚಿಸಿದ ಗದಗ–ಬೆಟಗೇರಿ ಮುನಿಸಿಪಾಲಿಟಿ"[೬] ಪುಸ್ತಕವು ನಗರಸಭೆಯ ಕಾಯ್ದೆ ಕಾನೂನು, ರಚನೆ, ಆಡಳಿತದ ಎಲ್ಲಾ ಅಂಶಗಳನ್ನು ಒಳಗೊಂಡ ನಗರಸಭೆಯ ಎಲ್ಲಾ ವಿವಿಧ ಕಾರ್ಯಗಳನ್ನು ವಿವರಿಸಿದೆ.

ಜೆಮ್ಸ್ ಇ.ಪೆಟ್ ರವರ "ಲೋಕಲ್ ಗವರ್ನಮೆಂಟ ಆ್ಯಂಡ್ ಎಡ್ಮಿನಿಸ್ಟ್ರೇಶನ್"[೭] ಪುಸ್ತಕವು ನಗರಸಭೆಯ ಪ್ರಗತಿ, ಸಂಘಟನೆ ಮತ್ತು ವ್ಯವಸ್ಥಾಪನೆ ಹಾಗೂ ಹಣಕಾಸು ಕಂದಾಯ ಹಾಗೂ ನಗರಸಭೆಯ ಹಲವಾರು ಕಾರ್ಯಗಳ ಬಗ್ಗೆ ವಿವರಿಸಿದೆ.

ಕಾರ್ಲ ಎ ಮಾರ್ಕ್ಸ್ ಕ್ಯಾಂಡಲಿಸ್‌ರವರ "ಅರ್ಬನ್ ಗವರ್ನಮೆಂಟ್ ಪೊಲಿಟಿಕ್ಸ್"[೮] ಪುಸ್ತಕವು ಪಟ್ಟಣ ಸರ್ಕಾರದ ರಚನೆ, ಕಾರ್ಯ ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಂಬಂಧ ಕುರಿತಾಗಿ ವಿವರಿಸುತ್ತದೆ.

ಹೆಚ್.ಡಿ.ಶೌರಿ ಅವರ ಅರ್ಬನ್ ಇಂಡೀಸ್, "ಎ ಪ್ಲಾನ್ ಫಾರ ಮುನಿಸಿಪಲ್ ರಿಫಾರ್ಮ್ಸ್"[೯] ಪುಸ್ತಕವು ನಗರಸಭೆಯ ಸಂವಿಧಾನ ಹಾಗೂ ರಚನೆ ಅಧಿಕಾರ ಮತ್ತು ಕಾರ್ಯ ನಿರ್ವಹಣೆ, ನಗರಸಭೆಯ ಹಣಕಾಸು ವ್ಯವಸ್ಥೆಗಳ ಬಗ್ಗೆ ಮಾಹಿತಿಯನ್ನು ದೊರಕಿಸಿಕೊಡುತ್ತವೆ.

ಆರ್.ಎನ್. ಶರ್ಮಾ ಆ್ಯಂಡ್ ದೇವೇಂದ್ರಕುಮಾರ ಅವರ "ಮುನಿಸಿಪಲ್ ಗವರ್ನಮೆಂಟ್ ಇನ್ ಇಂಡಿಯಾ"[೧೦] ಪುಸ್ತಕವು ನಗರಸಭೆಯ ರಚನೆ, ಕಾರ್ಯವ್ಯಾಪ್ತಿ, ರಾಜಕೀಯ ಮತ್ತು ನಗರಾಭಿವೃದ್ಧಿ ಕುರಿತು ವಿವರಿಸುತ್ತದೆ.

ಎ.ಅವಸ್ಥಿಯವರ "ಅರ್ಬನ್ ಗವರ್ನಮೆಂಟ್ ಇನ್ ಇಂಡಿಯಾ"[೧೧] ಪುಸ್ತಕವು ಸ್ಥಳೀಯ ಸರ್ಕಾರವು ಎದುರಿಸುತ್ತಿರುವ ಸಮಸ್ಯೆಗಳು ಮತ್ತು ಅವುಗಳ ಅಂತಸ್ತು, ಅವು ನಿರ್ವಹಿಸುವ ಕಾರ್ಯವ್ಯಾಪ್ತಿ, ಕಾರ್ಯಾಂಗ ವ್ಯವಸ್ಥೆ ಮತ್ತು ಅವು ರಾಜ್ಯ ಸರ್ಕಾರದೊಂದಿಗೆ ಹೊಂದಿರುವ ಸಂಬಂಧದ ಬಗ್ಗೆ ವಿವರಿಸುತ್ತದೆ. ಎಂ.ಪಿ. ಶರ್ಮಾರವರ "ಲೋಕಲ್ ಸೆಲ್ಪ ಗವರ್ನಮೆಂಟ್ ಇನ್ ಇಂಡಿಯಾ"[೧೨] ಪುಸ್ತಕವು ಸ್ಥಳೀಯ ಸರ್ಕಾರದ ಕಾರ್ಯಾಚರಣೆ, ಸಂಘಟಣೆ ಬಗ್ಗೆ ವಿವರಿಸುತ್ತದೆ.

ಮುನಿಸಿಪಲ್ ಸಂಸ್ಥೆಗಳ ಬೆಳವಣಿಗೆ ಮತ್ತು ನಿರ್ವಹಣಾ ವ್ಯವಸ್ಥೆ ಬಗ್ಗೆ ಗಮನಹರಿಸಿದೆ. ಎಂ.ಬಿ. ಭಾರ್ಗವ ರವರ "ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಇಂಡಿಯಾ"[೧೩] ಪುಸ್ತಕವು ನಗರ ಮತ್ತು ಗ್ರಾಮೀಣ ಪ್ರದೇಶದ ಸರ್ಕಾರಗಳ ಬೆಳವಣಿಗೆ ಮತ್ತು ಕಾರ್ಯ ನಿರ್ವಹಣೆ ವಿವರಿಸುವಲ್ಲಿ ಗಮನ ಹರಿಸಿದ್ದು ಕಂಡು ಬರುತ್ತದೆ. ಅಶಿರ್ವತಮ್ ಇ. ರವರ "ದಿ ರೋಲ್ ಆಫ್ ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಎ ಡೆಮಾಕ್ರಸಿ"[೧೪] ಲೇಖನದಲ್ಲಿ ಸ್ಥಾನಿಕ ಸರ್ಕಾರಗಳ ಕಾರ್ಯಗಳನ್ನು ಚರ್ಚಿಸುವುದರೊಂದಿಗೆ ಪ್ರಜಾಪ್ರಭುತ್ವದಲ್ಲಿ ಅವು ನಿರ್ವಹಿಸುವ ಪಾತ್ರ ಕುರಿತು ವಿವರಿಸಲಾಗಿದೆ.

ಭಡೆ.ಜಿ.ಎನ್. "ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಇಂಡಿಯಾ"[೧೫] ಪುಸ್ತಕವು ಗ್ರಾಮೀಣ ನಗರ ಸರ್ಕಾರಗಳ ಬಗ್ಗೆ ವಿವರಿಸಿದೆ.

ಪ್ರೊ.ಕೆ.ಎಸ್. ಸಿಂಗ್ ರವರ "ಎ ಸಿಂಪಲ್ ಸ್ಟಡಿ ಆಫ್ ಎಡ್ಮಿನಿಸ್ಟ್ರೇಶನ್"[೧೬] ಪುಸ್ತಕವು ಭಾರತದಲ್ಲಿ ನಿರ್ವಹಿಸುವ ಸ್ಥಾನಿಕ ಸರ್ಕಾರಳೊಂದಿಗೆ ಇಂಗ್ಲೆಂಡ್, ಅಮೇರಿಕಾ ಮತ್ತು ಸೋವಿಯತ್ ರಷ್ಯಾದ" ಸ್ಥಳೀಯ ಸರ್ಕಾರಗಳ ಕಾರ್ಯ ನಿರ್ವಹಣೆಯನ್ನು ಕುರಿತು ಹೋಲಿಕೆ ಮಾಡಿ ವಿವರಿಸುದನ್ನು ನೋಡಬಹುದಾಗಿದೆ.

ಡಾ.ಶಾಂತರಾಯ ಕೆ. ಜೊಗ್ಲೆ ರವರ "ಲೋಕಲ್ ಗವರ್ನಮೆಂಟ್ ಆ್ಯಂಡ್ ಎಡ್ಮಿನಿಸ್ಟ್ರೇಶನ್ ಇನ್ ಇಂಡಿಯಾ"[೧೭] ಪುಸ್ತಕದಲ್ಲಿ ಸ್ಥಳೀಯ ಸರ್ಕಾಗಳ ರಚನೆ, ಸಿಬ್ಬಂದಿ ವರ್ಗ, ಹಣಕಾಸು ವ್ಯವಸ್ಥೆಯ ಬಗ್ಗೆ ವಿವರಿಸುತ್ತದೆ. ಅಪ್ಪಾರಾವ್ ಟಿ.ರವರ "ಮುನಿಸಿಪಾಲಿಟಿ ಇಟ್ಸ್ ಸಿಗ್ನಿಫಿಕನ್ಸ್ ಮೀನಿಂಗ್ ಪರ್ಪಡ್ ಆಂಡ್ ಇಂಪಾರ್ಟೆಂಟ್ಸ್ ಆಫ್ ಮುನಿಸಿಪಲ್ ಗರ್ವನ್‌ಮೆಂಟ್"[೧೮] ಪುಸ್ತಕದಲ್ಲಿ ಮುನಿಸಿಪಲ್ ಸರ್ಕಾರದ ಅರ್ಥ, ಅವುಗಳ ಬೆಳವಣಿಗೆಯ ಹಿನ್ನೆಲೆ, ಬ್ರಿಟಿಷ್ ಸರಕಾರ ಕಾಲದಲ್ಲಿನ ಸ್ಥಾನಿಕ ಸರಕಾರಗಳು ಮತ್ತು ಸರಕಾರದ ಉದ್ದೇಶ, ಮಹತ್ವದ ಪಾತ್ರ ಕುರಿತು ಗಮನ ಹರಿಸಲಾಗಿದೆ.

ಬಿ.ಎಸ್. ಭಾರ್ಗವ ಮತ್ತು ರಾಮರಾವ್ ರವರ "ಇಂಡಿಯನ್ ಲೋಕಲ್ ಗರ್ವನ್‌ಮೆಂಟ್"[೧೯] ಪುಸ್ತಕವು ಭಾರತದಲ್ಲಿ ಸ್ಥಳೀಯ ಸರ್ಕಾರದ ಅಸ್ತಿತ್ವ, ಬೆಳವಣಿಗೆ ಮತ್ತು ಅವುಗಳ ಕಾರ್ಯ ಕುರಿತಾಗಿ ಚರ್ಚಿಸಿದೆ.

ಚಂದ್ರಪ್ರಕಾಶ ಭಂಡಾರಿಯವರ "ಮುನಿಸಿಪಾಲಿಟೀಸ್ ಆ್ಯಂಡ್ ದೇರ ಫೈನಾನ್ಸ್"[೨೦] ಪುಸ್ತಕದಲ್ಲಿ ನಗರಸಭೆಯ ಹಣಕಾಸು ಆಡಳಿತವನ್ನು ವಿವರಿಸಿದ್ದು ಕಂಡು ಬರುತ್ತದೆ.

ಶ್ರೀ ರಾಮ ಮಹೇಶ್ವರಿ ಅವರ "ಲೋಕಲ್ ಗವರ್ನಮೆಂಟ್ ಇನ್ ಇಂಡಿಯಾ"[೨೧] ಪುಸ್ತಕದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶದ ಸರ್ಕಾರಗಳ ಅರ್ಥ, ಪ್ರಾಮುಖ್ಯತೆ ಬೆಳವಣಿಗೆ ಹಾಗೂ ಕಾರ್ಯ ನಿರ್ವಹಣೆಯ ಬಗ್ಗೆ ತಿಳಿಸಿದೆ. ಎಂ.ವೆಂಕಟರಂಗಯ್ಯ ಮತ್ತು ಎಂ.ಪಟ್ಟಬರಾಮ್ ಅವರ "ಲೋಕಲ್

ಗವರ್ನಮೆಂಟ್ ಇನ್ ಇಂಡಿಯಾ"[೨೨] ಪುಸ್ತಕವು ಭಾರತದಲ್ಲಿ ಸ್ಥಳೀಯ ಸರ್ಕಾರಗಳ ವಿಕಾಸ ಮತ್ತು ಅವುಗಳ ಕಾರ್ಯ ನಿರ್ವಹಣೆ ಬಗ್ಗೆ ತಿಳಿಸಿದ್ದು ಕಂಡು ಬರುತ್ತದೆ. ಆರ್.ಎನ್.ಶರ್ಮಾ ಮತ್ತು ದೇವೇಂದ್ರಕುಮಾರ ಅವರ "ಮುನಿಸಿಪಲ್ ಗವರ್ನಮೆಂಟ್ ಇನ್ ಇಂಡಿಯಾ"[೨೩] ಪುಸ್ತಕವು ನಗರಸಭೆಯ ಬೆಳವಣಿಗೆ ಅಭಿವೃದ್ಧಿ ರಚನೆ ಕಾರ್ಯಕ್ರಮಗಳನ್ನು ಕುರಿತು ವಿವರಿಸಿದ್ದು ಕಂಡು ಬರುತ್ತದೆ. ಅರ್ಥರ್ ಡಬ್ಲ್ಯೂ ಜೇಮ್ಸ ರವರ "ಇಂಟ್ರುಡಕ್ಷನ್ ಟು ಮುನಿಸಿಪಲ್ ಗವರ್ನಮೆಂಟ್ ಆ್ಯಂಡ್ ಎಡ್ಮಿನಿಸ್ಟ್ರೇಶನ್"[೨೪] ಪುಸ್ತಕವು ನಗರ ಸರ್ಕಾರಗಳ ಪರಿಚಯ ಮತ್ತು ಅದರ ಹುಟ್ಟು ಹಾಗೂ ಬೆಳವಣಿಗೆ ಕಾರ್ಯಾಚರಣೆ ಬಗ್ಗೆ ತಿಳಿಸಿರುವುದು ಕಂಡು ಬರುತ್ತದೆ ಎಂದು ಹೇಳಬಹುದು.

ಮೊಹಿತ್ ಭಟ್ಟಾಚಾರ್ಯರವರ "ಸ್ಟೇಟ್ ಮುನಿಸಿಪಲ್ ರಿಲೇಶನ್"[೨೫] ಪುಸ್ತಕವು ನಗರ ಸರ್ಕಾರಗಳ ಕಾರ್ಯಾಚರಣೆ ಮತ್ತು ರಾಜ್ಯ ಸರ್ಕಾರಗಳ ಕಾರ್ಯಾವರಣೆ ಕುರಿತು ಮತ್ತು ಅವುಗಳೆರಡರ ಸಂಬಂಧ ಕುರಿತು ವಿವರಿಸುತ್ತದೆ. ಪ್ರತಾಪಸಿಂಗ್ ರವರ "ಅರ್ಬನ್ ಗವರ್ನಮೆಂಟ್ ಇನ್ ಇಂಡಿಯಾ"[೨೬] ಪುಸ್ತಕವು ನಗರ ಸರ್ಕಾರದ ಹುಟ್ಟು ಬೆಳವಣಿಗೆ ಹಾಗೂ ನಗರ ಸರ್ಕಾರಗಳ ಎಲ್ಲ ಕಾರ್ಯಗಳನ್ನು ಕುರಿತು ಚರ್ಚಿಸಿದೆ. ನಾಯರ್ ಟಿ.ಎಂ. ರವರ "ಪ್ರಿನ್ಸಿಪಲ್ ಆ್ಯಂಡ್ ಪ್ರ್ಯಾಕ್ಟೀಸ್ ಆಟ್ ಮುನಿಸಿಪಲ್ ಗವರ್ನಮೆಂಟ್"[೨೭] ಪುಸ್ತಕವು ನಗರ ಸರ್ಕಾರಗಳ ಮೂಲ ತತ್ವಗಳನ್ನು ಕುರಿತು ಮತ್ತು ಅವು ಆ ಮೂಲ ತತ್ವಗಳಡಿಯಲ್ಲಿ ಹೇಗೆ ತಮ್ಮ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ತಿಳಿಸಿರುವುದು ಕಂಡು ಬರುತ್ತದೆ.

ರಾವ್ ರವರ "ಫೈನಾನ್ಸ್ ಮತ್ತು ಮುನಿಸಿಪಾಲಿಟೀಸ್ ಇನ್ ನಾರ್ಥ ಕೆನರಾ ಡಿಸ್ಟಿಕ್ಟ್ ದಲ್ಲಿ"[೨೮] ಮುನಿಸಿಪಾಲಿಟಿಗಳ ಹಣಕಾಸು ಮತ್ತು ಇದರ ಹಣಕಾಸು ಯೋಜನೆಗಳನ್ನು ಕುರಿತು ತಿಳಿಸುತ್ತದೆ.

ಪಂಡಿತ್ ವಿಜಯಲಕ್ಷ್ಮೀ ರವರ "ಎಲಿಟ್ಸ್ ಅಂಡ್ ಅರ್ಬನ್ ಪೋಲಿಟಿಕ್ಸ್ ಎ ಕೇಸ್ ಸ್ಟಡಿ ಆಫ್ ಡೆಲ್ಲಿ"[೨೯] ಪುಸ್ತಕವು, ದೆಹಲಿಯ ನಗರ ಸರ್ಕಾರದ ವ್ಯವಸ್ಥೆ ಕುರಿತು ಚರ್ಚಿಸಿದೆ. "ಮುನಿಸಿಪಲ್ ಎನುವಲ್ ರಿಪೋರ್ಟದ ಕರ್ನಾಟಕ ಹೆಲ್ತ್ ಅಂಡ್ ಮುನಿಸಿಪಲ್ ಎಡ್ಮಿನಿಸ್ಟ್ರೇಶನ್ ಡವಲಪಮೆಂಟ್"[೩೦] ವರದಿಯ ನಗರ ಸರ್ಕಾರ ವ್ಯವಸ್ಥೆಯಲ್ಲಿ ಜನತೆಯ ಆರೋಗ್ಯ ಅಭಿವೃದ್ಧಿ ಮತ್ತು ಹಣಕಾಸು ಬಗ್ಗೆ ಗಮನಹರಿಸಿದ್ದು ಕಂಡು ಬರುತ್ತದೆ.

ಮೈಸೂರು ಲಾ ವಿಭಾಗವು ತಯಾರಿಸಿದ "ಮೈಸೂರು ಮುನಿಸಿಪಾಲಿಟಿ ಆಕ್ಟ್ ೧೯೪೭"[೩೧] ಪುಸ್ತಕವು ಕರ್ನಾಟಕದಲ್ಲಿ ನಗರ ಸರ್ಕಾರಗಳ ಹುಟ್ಟು ಬೆಳವಣಿಗೆ, ಮುನಿಸಿಪಾಲಿಟಿ ಹಣಕಾಸು ಸಿಬ್ಬಂದಿ, ಅಧ್ಯಕ್ಷ, ಉಪಾಧ್ಯಕ್ಷರ ಆಯ್ಕೆ, ಸದಸ್ಯರ ಆಯ್ಕೆ ಮತ್ತು ಅದರ ಕಾರ್ಯ ಹಾಗೂ ಕಮಿಷನರ್ ನೇಮಕ, ಅವರ ಕಾರ್ಯ ಹೀಗೆ ಮುನಿಸಿಪಾಲಿಟಿ ಹಲವು ಹತ್ತು ಕಾರ್ಯಕ್ರಮಗಳ ಬಗ್ಗೆ ವಿವರಿಸಿದೆ.

ಸ್ಥಳೀಯ ಸರ್ಕಾರ ಅಂದರೆ ಪುರಸಭೆಯ ಅಭಿವೃದ್ಧಿಯಲ್ಲಿ ನಗರ ಮತ್ತು ಸರ್ಕಾರದ ಕಾರ್ಯಾಚರಣೆಯಲ್ಲಿ ರಾಜಕೀಯ ಪಕ್ಷಗಳ ಪಾತ್ರವೇನೆಂಬುದನ್ನು ತಿಳಿಯಲು ಈ ಕೆಳಗಿನ ಗ್ರಂಥಗಳು ಸಹಾಯಕಾರಿಯಾಗಿವೆ. ಡಾ. ಗಂಗೂಲಿ ರವರ "ವೋಟಿಂಗ ಬಿಹೇವಿಯರ್ ಇನ್ ಎ ಡೆವಲಪಿಂಗ್ ಸೊಸೈಟಿ"[೩೨] ಪುಸ್ತಕವು ಸಮಾಜದ ಎಲ್ಲ ಜನತೆಯ ಮತದಾನದ ನಡತೆಯನ್ನು ತಿಳಿಸುತ್ತದೆ. ಎಂ.ಎಸ್.ಮಿಶ್ರಾರವರ "ಪೊಲಿಟಿಕ್ಸ್ ಆಫ್ ರಿಜನಾಲಿಜಂ ಇನ್ ಇಂಡಿಯಾ"[೩೩] ಪುಸ್ತಕವು ಪ್ರಾದೇಶಿಕ ಪಕ್ಷಗಳ ಮಹತ್ವ ಕುರಿತಾಗಿ ಹಾಗೂ ಸ್ಥಳೀಯ ಮಟ್ಟದಲ್ಲಿ ಈ ಪಕ್ಷಗಳ ಕಾರ್ಯಾಚರಣೆ ಕುರಿತು ವಿವರಿಸುತ್ತದೆ.

ಎಸ್.ಎನ್.ಸದಾಶಿವನ್ ರವರ "ಪಾರ್ಟಿ ಆ್ಯಂಡ್ ಡೆಮಾಕ್ರಸಿ ಇನ್ ಇಂಡಿಯಾ"[೩೪] ಪುಸ್ತಕವು ಭಾರತದಲ್ಲಿನ ಎಲ್ಲಾ ಪಕ್ಷಗಳ ಹುಟ್ಟು ಬೆಳವಣಿಗೆ ಕಾರ್ಯಾಚರಣೆ ಬಗ್ಗೆ ತಿಳಿಸುವುದರ ಜೊತೆಗೆ ಅವು ಪ್ರಜಾಪ್ರಭುತ್ವದಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿವೆ ಎಂಬುದನ್ನು ವಿವರಿಸಿದೆ. ಮತ್ತು ಎಸ್.ಪಿ.ವರ್ಮ ಮತ್ತು ನಯಾರ್ ರವರ "ವೋಟಿಂಗ್ ಬಿಹೇವಿಯರ್ ಇನ್.ಎ. ಚೇಜಿಂಗ ಸೊಸೈಟಿ"[೩೫] ಪುಸ್ತಕವು ಗ್ರಾಮೀಣ ಮತ್ತು ಸಮುದಾಯ ಮತದಾನದ ಅಂಕಿ ಅಂಶಗಳ ಬಗ್ಗೆ ವಿವರಿಸಿದೆ.

ವಿಶ್ವಜಿತ ಬ್ಯಾನರ್ಜಿರವರ "ರೂರಲ್ ಟು ಅರ್ಬನ್ ಮಾಗ್ರೇಶನ್ ಅಂಡ್ ದಿ ಅರ್ಬನ್ ಲೇಬರ ಮಾರ್ಕೆಟ್"[೩೬] ಪುಸ್ತಕವು ಗ್ರಾಮಾಂತರ ಪ್ರದೇಶದಿಂದ ನಗರಕ್ಕೆ ಜನತೆಯು ವಲಸೆ ಬರುವದಕ್ಕೆ ಕಾರಣ ಮತ್ತು ಅಲ್ಲಿನ ಕೂಲಿ ಕಾರ್ಮಿಕರ ಬಗ್ಗೆ ನಗರ ಪ್ರದೇಶದಲ್ಲಾಗುವ ತೊಂದರೆ ಹಾಗೂ ಲಾಭ ಕುರಿತು ವಿವರಿಸಲಾಗಿದೆ. ಬಿ.ಎಸ್.ಡಬ್ಲು ಸನ್ ಕ್ಲೈರ ರವರ "ಅರ್ಬನೈಜೇಶನ್ ಆಂಡ್ ಲೇಬರ್ ಮಾರ್ಕೆಟ್ಸ್, ಇನ್ ಡೆವಲಪಿಂಗ್ ಕಂಟ್ರೀಸ್"[೩೭] ಪುಸ್ತಕವು ನಗರಗಳ ಬೆಳವಣಿಗೆ, ಜನಸಂಖ್ಯೆ, ವಸತಿ, ಉದ್ಯೊಗ, ಉದ್ಯೋಗಿಕರಣದ ಬೆಳವಣಿಗೆಗಳ ಬಗ್ಗೆ ಕುರಿತು ವಿವರಿಸಿದೆ. ಕೆ.ಎನ್.ಗೋಪಿ ರವರ "ಪ್ರೋಸೆಸ್ ಆಪ್ ಅರ್ಬನ್ ಡೆವಲಪ್‌ಮೆಂಟ್ ಎ ಮಾಡೆಲ್"[೩೮] ಪುಸ್ತಕವು ನಗರೀಕರಣ ಮತ್ತು ಅಲ್ಲಿನ ಸಾಮಾಜಿಕ ಆರ್ಥಿಕ, ರಾಜಕೀಯ, ಸ್ಥಿತಿಗಳ ಅಭಿವೃದ್ಧಿಯ ಬಗ್ಗೆ ವಿವರಿಸಿದೆ. ಸ್ಮಿಥ್, ಸ್ಕ್ಯಾಂಪತ್ ರಿಸ್ಟರ್ ರವರ "ರಿಯಲ್ ಎಸ್ಟೇಟ್ ಆ್ಯಂಡ್ ಅರ್ಬನ್ ಡವಲಪಮೆಂಟ್"[೩೯] ಪುಸ್ತಕವು ನಗರ ಜೀವನದ ಸ್ಥೀತಿಗತಿಗಳ ಬಗ್ಗೆ ಮತ್ತು ನಗರಾಭಿವೃಧಿಯ ಏಳು ಬೀಳುಗಳ ಬಗ್ಗೆ ವಿವರಿಸಿದೆ.

ಹೆಚ್.ಡಿ.ಕೋಪಾರ್ಡೆಕರ್ ರವರು "ಸೋಸಿಂಯಲ್ ಆಸ್ಫೆಕ್ಟ್ ಆಫ್ ಅರ್ಬನ್ ಡೆವಲಪಮೆಂಟ್"[೪೦] ಪುಸ್ತಕವು ನಗರಾಬಿವೃದ್ದಿಯ ಹುಟ್ಟು ಮತ್ತು ಅದರ ಗುಣಲಕ್ಷಣಗಳ ಬಗ್ಗೆ ವಿವರಿಸಿ ನಗರ ಪ್ರದೇಶದ ಬೆಳವಣಿಗೆಗೆ ಸಹಾಯಕವಾದ ಅಂಶಗಳನ್ನು ಮತ್ತು ಸಮಸ್ಯೆಗಳ ಬಗ್ಗೆ ವಿವರಿಸಿದ್ದುದು ಕಂಡು ಬರುತ್ತದೆ. ಎ.ಜಿ. ನೊಬೆಲ್ಸ್ ಬಾಂಬೆ, ಮತ್ತು ಅಶೋಕ ದತ್ತ ರವರ "ಇಂಡಿಯನ್ ಅರ್ಬನೈಜೇಶನ್ ಆ್ಯಂಡ್ ಪ್ಲಾನಿಂಗ್ ವೆಕಲ್ಸ್ ಆಫ್ ಮಾಡರ್ನೈಜೇಶನ್"[೪೧] ಪುಸ್ತಕವು ನಗರೀಕರಣ ಮತ್ತು ಆಧುನಿಕರಣ ಕುರಿತು ಹಾಗೂ ದೇಶದ ಪ್ರಮುಖ ನಗರ ವ್ಯವಸ್ಥೆಗಳನ್ನು ಕುರಿತು ವಿವರಿಸಲಾಗಿದೆ. ಬಿ.ಹೆರ್ರಿಕ್ ಆಂಡ್ ಬಿ.ಹಡಸನ್ ರವರ ಅರ್ಬನ ಪಾವರ್ಟಿ ಆಂಡ್ ಎಕನಾಮಿಕ್ ಡೆವಲಪ್‌ಮೆಂಟ್"[೪೨]

ಪುಸ್ತಕವು ನಗರ ವ್ಯವಸ್ಥೆಗೆ ಜನತೆಯ ವಲಸೆ ಕುರಿತು ಹಾಗೂ ಅಲ್ಲಿನ ಸಮಸ್ಯೆಯ ಹಲವು ಹತ್ತು ಮುಖಗಳ ಬಗ್ಗೆ ಮತ್ತು ನಗರ ಯೋಜನೆ ಹಣಕಾಸು ಮತ್ತು ಆಡಳಿತದ ಬಗ್ಗೆ ವಿವರಿಸಿದೆ. ಫಿಟರ್ ಮೈಜೊವಸ್ಕಿ ಆಂಡ್ ಮಾಹ್ಲಿನ್ ಸ್ಟ್ರುಂಜಮ್ ರವರ "ಕರೆಂಟ್ ಇಶ್ಯೂ ಇನ್ ಅರ್ಬನ್ ಎಕನಾಮಿಕ್ಸ್"[೪೩] ಪುಸ್ತಕವು ನಗರೀಕರಣದ ಬೆಳವಣಿಗೆ, ಕುರಿತು ಸವಿಸ್ತಾರವಾಗಿ ವಿವರಿಸಿದೆ.

ಬ್ರೈನ್ ಗೊಡೆಲ್ ರವರ "ದಿ ಎಕನಾಮಿಕ್ಸ್ ಆಫ್ ಅರ್ಬನ್ ಏರಿಯಾ"[೪೪] ಪುಸ್ತಕವು ನಗರ ವ್ಯವಸ್ಥೆಯಲ್ಲಿರುವ ಎಲ್ಲಾ ಸಮುದಾಯಗಳ ಆರ್ಥಿಕ ಪರಿಸ್ಥಿತಿ ಕುರಿತಾಗಿ ವಿವರಿಸಿದೆ. ಎಲ್.ಎಸ್.ಪ್ರಕಾಶರಾವ್ ರವರ "ಅರ್ಬನೈಜೆಶನ್ ಇನ್ ಇಂಡಿಯಾ"[೪೫] ಪುಸ್ತಕವು ನಗರೀಕರಣದ ಪ್ರಗತಿ. ವ್ಯವಸ್ಥೆ, ನಗರ ಮತ್ತು ಇತರೆ ಪ್ರದೇಶಗಳಿಗಿರುವ ಸಂಬಂಧ, ನಗರದ ರಚನೆ ಹಾಗೂ ನಗರದ ಹವಾಮಾನ ಮತ್ತು ಕೊಳಚೆ ಪ್ರದೇಶದಲ್ಲಿನ ವ್ಯವಸ್ಥೆ ಕುರಿತಾಗಿ ಚರ್ಚಿಸಿದೆ. ಡಿ.ವಾಸುದೇವರಾವ್ ರವರ "ಅರ್ಬನ್ ಡೆವಲಪ್‌ಮೆಂಟ್ ಪ್ರಾಬ್ಲಮ್ಸ್"[೪೬] ಪುಸ್ತಕವು ನಗರದ ಬೆಳವಣಿಗೆಯ ಸಮಸ್ಯೆಗಳ ಬಗ್ಗೆ ಹಾಗೂ ಅವುಗಳ ಅಭಿವೃದ್ಧಿಗೆ ಸರ್ಕಾರವು ಹಾಕಿಕೊಂಡ ಯೋಜನೆಗಳನ್ನು ಕುರಿತಾಗಿ ವಿವರಿಸಿದೆ.

"ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಎಡ್ಮಿನಿಸ್ಟ್ರೇಶನ್‌ದ ಅರ್ಬನ್ ಪ್ಲಾನಿಂಗ್ ಅಂಡ್ ಡೆವಲಪ್‌ಮೆಂಟ್ ಅಥಾರಿಟಿ"[೪೭] ಪುಸ್ತಕವು ನಗರ ಸರ್ಕಾರದಲ್ಲಿ ಸ್ಥಾಪಿತವಾದ ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯ ವೈಖರಿ ಮತ್ತು ನಗರ ಯೋಜನೆಗಳನ್ನು ಕುರಿತು ಹಾಗೂ ನಗರ ಆಡಳಿತ ದಿಂದಾಗುವ ನಗರಾಭಿವೃದ್ಧಿ ಕುರಿತು ವಿವರಿಸಿದೆ.

ಡಗ್ಲಸ್ ಎಂ.ಬ್ರೈನ್ ರವರ "ಇಂಟ್ರುಡಕ್ಷನ್ ಟು ಅರ್ಬನ್ ಎಕನಾಮಿಕ್ಸ್"[೪೮] ಪುಸ್ತಕವು ನಗರದ ಕಾರ್ಯಕ್ರಮಗಳು, ಅಲ್ಲಿನ ಆರ್ಥಿಕ ಪರಿಸ್ಥಿತಿ ಅಲ್ಲಿನ ಹೊಂದಾಣಿಕೆ, ಭೂಮಿಯ ಉಪಯೋಗ, ವಸತಿ, ನಗರ ಸಾರಿಗೆ, ಸಾರ್ವಜನಿಕ ವಲಯದ ಬಗ್ಗೆ, ಬಡತನದ ಸಮಸ್ಯೆ ಹಾಗೂ ನಗರದ ವಾತಾವರಣ ಕುರಿತು ವಿವರಿಸಿದೆ.

ಶರ್ಮಾ ಬಿ.ಎ.ವಿ. ಆ್ಯಂಡ್ ಆರ್.ಟಿ.ಜಂಗಮ್ ರವರ "ದಿ ಬಾಂಬೆ ಮುನಿಸಿಪಲ್ ಕಾರ್ಪೋರೇಶನ್ ಯಾನ್ ಇಲೆಕ್ಷನ್ ಸ್ಟಡೀ"[೪೯] ಪುಸ್ತಕವು ಮುನಿಸಿಪಲ್ ಚುನಾವಣೆ ಬಗ್ಗೆ ಮತ್ತು ಅಲ್ಲಿನ ರಾಜಕೀಯ ಪಕ್ಷಗಳ ಬಗ್ಗೆ ವಿವರಿಸಿದೆ.

ಅಪ್ಪಾರಾವ್.ಡಿ ರವರ "ಪಾರ್ಟೀಸ್ ಆ್ಯಂಡ್ ಪಾಲಿಟಿಕ್ಸ್ ಇನ್ ದಿ ಕಾರ್ಪೋರೇಶನ್ ಆಫ್ ಹೈದರಾಬಾದ"[೫೦] ಈ ಲೇಖನದಲ್ಲಿ ಹೈದರಾಬಾದ ನಗರ ಮುನಿಸಿಪಾಲಿಟಿ ಕಾರ್ಪೋರೇಶನ್‌ದಲ್ಲಿ ರಾಜಕೀಯ ಪಕ್ಷಗಳು ಯಾವ ಪಾತ್ರ ನಿರ್ವಹಿಸುತ್ತವೆ ಎಂಬುದನ್ನು ತಿಳಿಸುತ್ತದೆ. ಮತ್ತು ರಾಜಕೀಯ ಪಕ್ಷಗಳ ಕಾರ್ಯಕ್ರಮಗಳ ಮತ್ತು ಸ್ಥಳೀಯ ಅಭಿವೃದ್ಧಿ ನಾಗರಿಕ ಸಮಸ್ಯೆಗಳ ಬಗ್ಗೆ ತಿಳಿಸುತ್ತದೆ.

ಭಡೆ ಜಿ.ಎಸ್. ಮತ್ತು ಎಂ.ಯು.ರಾವ್, ಬಾಂಬೆ "ಸಿವಿಕ್ ಎಲೆಕ್ಷನ್ ಆಟ್ ೧೯೬೮"[೩೧] ಈ ಲೇಖನವು ಮಾರ್ಚ್ ೧೯೬೮ ರಲ್ಲಿ ನಡೆದ ಬಾಂಬೆ ಮುನಿಸಿಪಲ್ ಚುನಾವಣೆ, ಮಾಹಿತಿಯನ್ನು ವಿವರಿಸುತ್ತದೆ. ಬರ್ಫಿವಾಲ್ ಚುನಿಲಾಲ್, "ದಿ. ಪೋಲಿಟಿಕಲ್ ಪಾರ್ಟೀಸ್ ಇನ್ ಲೋಕಲ್ ಬಾಡೀಜ್"[೩೨] ಈ ಲೇಖನದಲ್ಲಿ ಸ್ಥಳೀಯ ಸರ್ಕಾರಗಳಲ್ಲಿ ರಾಜಕೀಯ ಪಕ್ಷಗಳ ಗುಣಗಳು ಮತ್ತು ಅವಗುಣಗಳ ಬಗ್ಗೆ ವಿವರಿಸುತ್ತದೆ.

ಶ್ರೀ ರಾಮು ಮಹೇಶ್ವರಿಯವರ "ಲೋಕಲ್ ಗೌರ್ನಮೆಂಟ್ ಇನ್ ಇಂಡಿಯಾ"[೩೩] ಎಂಬ ಪುಸ್ತಕದಲ್ಲಿ ಸ್ಥಾನಿಕ ಸರ್ಕಾರಗಳ ಅರ್ಥ, ಪ್ರಾಮುಖ್ಯತೆ, ಅವುಗಳ ಐತಿಹಾಸಿಕ ಹಿನ್ನಲೆಯನ್ನು ಮತ್ತು ಅವುಗಳ ಸದ್ಯದ ಕಾರ್ಯನಿರ್ವಹಣೆಯ ವಿವರ ನೀಡುತ್ತದೆ.

ಡಾ.ಶಾಂತರಾಮ್.ಕೆ. ಭೋಗ್ಲೆ ರವರ "ಲೋಕಲ್ ಗೌರ್ನಮೆಂಟ್ ಆ್ಯಂಡ್ ಎಡ್ಮಿನಿಸ್ಟ್ರೇಶನ್ ಇನ್ ಇಂಡಿಯಾ"[೩೪] ಪುಸ್ತಕದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶದ ಸ್ಥಾನಿಕ ಸಂಸ್ಥೆಗಳ ರಚನೆ, ಸಿಬ್ಬಂದಿ ವರ್ಗದ ರಚನೆ, ವಿವರಣೆ, ಹಣಕಾಸು ವ್ಯವಸ್ಥೆ ಮತ್ತು ಅವುಗಳು ನಿರ್ವಹಿಸುವ ಕಾರ್ಯಗಳ ಬಗ್ಗೆ ವಿವರಿಸುತ್ತದೆ.

ಬಡೆ.ಜಿ.ಎಸ್. ರವರ "ಲೋಕಲ್ ಸೇಲ್ಫ್ ಗೌರ್ನಮೆಂಟ್ ಇನ್ ಇಂಡಿಯಾ"[೩೫] ಪುಸ್ತಕವು ಗ್ರಾಮೀಣ ಮತ್ತು ನಗರ ಪ್ರದೇಶದ ಸ್ಥಾನಿಕ ಸಂಸ್ಥೆಗಳ ವಿವರಣೆಯನ್ನು ನೀಡುತ್ತದೆ.

ಎಮ್.ಬಿ.ಭಾರ್ಗವ್ ರವರ "ಲೋಕಲ್ ಸೇಲ್ಫ್ ಗೌರ್ನಮೆಂಟ್ ಇನ್ ಇಂಡಿಯಾ"[೩೬] ಎಂಬ ಪುಸ್ತಕದಲ್ಲಿ ನಗರ ಸರ್ಕಾರಗಳ ಬೆಳವಣಿಗೆ ಮತ್ತು ಕಾರ್ಯನಿರ್ವಹಣೆಯನ್ನು ವಿವರಿಸುತ್ತದೆ.

ಎ.ಅವಸ್ತಿಯವರ "ಅರ್ಬನ್ ಗೌರ್ನಮೆಂಟ್ ಇನ್ ಇಂಡಿಯಾ"[೩೭] ಪುಸ್ತಕದಲ್ಲಿ ಸ್ಥಾನಿಕ ಸರ್ಕಾರಗಳು ಎದುರಿಸುತ್ತಿರುವ ಕೆಲವು ಸಮಸ್ಯೆಗಳು, ಅವುಗಳ ಸಂವಿಧಾನಾತ್ಮಕ ಅಂತಸ್ತು ಅವು ನಿರ್ವಹಿಸುವ ಕಾರ್ಯಗಳ ವ್ಯಾಪ್ತಿಯ ಸೀಮಿತತೆ, ಅವುಗಳ ಕಾರ್ಯಾಂಗ ವ್ಯವಸ್ಥೆ ಮತ್ತು ಅವು ರಾಜ್ಯ ಸರ್ಕಾರದೊಂದಿಗೆ ಹೊಂದಿರುವ ಸಂಬಂಧ ಕುರಿತು ವಿವರಿಸುತ್ತದೆ.

ಎಂ.ಫಿ.ಶರ್ಮ ರವರ "ಲೋಕಲ್ ಸೇಲ್ಫ್ ಗೌರ್ನಮೆಂಟ್ ಇನ್ ಇಂಡಿಯಾ"[೩೮] ಪುಸ್ತಕದಲ್ಲಿ ಸ್ಥಾನಿಕ ಸರ್ಕಾರಗಳ ಕಾರ್ಯಾಚರಣೆ, ಸ್ಥಳೀಯ ಸಂಘಟನೆ, ಮುನಿಸಿಪಲ್ ಸಂಸ್ಥೆಗಳ ಬೆಳವಣಿಗೆ, ನಾಯಕತ್ವ ಮತ್ತು ನಿರ್ವಹಣೆ ವ್ಯವಸ್ಥೆಯ ಬಗ್ಗೆ ತಿಳಿಸುತ್ತದೆ.

ಅಪ್ಪಾರವ್.ಟಿ ರವರ "ಮುನಿಸಿಪಾಲಿಟಿ ಇಟ್ಸ್ ಸಿಗ್ನಿಫಿಕೆನ್ಸ್ ಮಿನಿಂಗ್ ಪರ್ಪಜ್ ಆಂಡ್ ಇಂಪಾರ್ಟನ್ಸ್ ಆಫ್ ಮುನಿಸಿಪಲ್ ಗೌರ್ನಮೆಂಟ್"[೩೯] ಎಂಬ ಪುಸ್ತಕದಲ್ಲಿ ಮುನಿಸಿಪಲ್ ಸರ್ಕಾರಗಳ

ಅರ್ಥ, ಅವುಗಳ ಬೆಳವಣಿಗೆಯ ಐತಿಹಾಸಿಕ ಹಿನ್ನಲೆ, ಬ್ರಿಟಿಷ್ ಸರ್ಕಾರ ಕಾಲದಲ್ಲಿಯ ಸ್ಥಾನಿಕ ಸರ್ಕಾರಗಳು, ಮುನಿಸಿಪಲ್ ಸಂಸ್ಥೆಗಳ ಉದ್ದೇಶ ಮತ್ತು ಅವುಗಳ ಮಹತ್ವದ ಪಾತ್ರವನ್ನು ವಿವರಿಸಲಾಗಿದೆ.

ಚಂದ್ರಪ್ರಕಾಶ ಬಾಂಬರಿಯವರು "ಮುನಿಸಿಪಲ್ ಆ್ಯಂಡ್ ದೇಯರ್ ಫೈನಾನ್ಸ್"[೬೦] ಪುಸ್ತಕದಲ್ಲಿ ನಗರಸಭೆಗಳ ಹಣಕಾಸು ಆಡಳಿತವನ್ನು ವಿವರಿಸಲಾಗಿದೆ.

ಚೆನ್ನಬಸವಣ್ಣ ತೆವರಮೆಹಳ್ಳಿಯವರ "ಸವಣೂರ ತಾಲೂಕ ದರ್ಶನ"[೬೧] ಎಂಬ ಪುಸ್ತಕದಲ್ಲಿ ಸವಣೂರ ತಾಲೂಕಿನ ಐತಿಹಾಸಿಕ ಹಿನ್ನಲೆಯೊಂದಿಗೆ ಅಲ್ಲಿನ ಸಂಪೂರ್ಣ ಹಾಗೂ ಸಮಗ್ರವಾದ ಚಾರಿತ್ರಿಕ ಮಾಹಿತಿಯನ್ನು ನೀಡಲಾಗಿದೆ.

ಡಾ.ಸತೀಶ್ ಎಸ್.ಗವಾತಿಯವರ "ದಿ ಇಂಪ್ಯಾಕ್ಟ್ ಆಫ್ ಎಕನಾಮಿಕ್ ಡೆವಲಪ್‌ಮೆಂಟ್ ಆನ್ ಪೋಲಿಟಿಕಲ್ ಪಾರ್ಟಿ ಸಿಫೆಶನ್ ಎ ಮೈಕ್ರೋಸ್ಟಡಿ"[೬೨] ಎಂಬ ಪುಸ್ತಕದಲ್ಲಿ ರಾಜಕೀಯ ಭಾಗವಹಿಸುವಿಕೆಯಲ್ಲಿ ಗಣ್ಯರ ಪಾತ್ರ ಹಾಗೂ ಸಾಮಾಜಿಕ ಸಂಸ್ಥೆಗಳ ಕೆಲಸ ಕಾರ್ಯಗಳು ಮತ್ತು ಅವುಗಳ ಆರ್ಥಿಕ, ಸಾಮಾಜಿಕ ಅಭಿವೃದ್ಧಿ ಕುರಿತು ವಿವರಿಸುವರು.

ಹೆರಾಲ್ಡ್ ಜಿಂಕ್ ರವರ "ಮಾರ್ಡನ್ ಗೌರ್‍ನಮೆಂಟ್''[೬೩] ಎಂಬ ಪುಸ್ತಕದಲ್ಲಿ ಭಾರತದ ಅಭಿವೃದ್ಧಿ ರಾಜಕೀಯದಲ್ಲಿ ಸಾರ್ವಜನಿಕ ಯೋಜನೆಗಳ ಪಾತ್ರ ಮತ್ತು ಸ್ಥಳೀಯ ಸರ್ಕಾರಗಳ ಅಭಿವೃದ್ಧಿ ಕುರಿತು ವಿವರಿಸಲಾಗಿದೆ.

ಅಲ್‌ಫ್ರೇಡ್, ಡಿಸೋಜಾ ರವರ "ದಿ ಪೋಲಿಟಿಕ್ಸ್ ಆಫ್ ಚೆಂಜ್ ಅಂಡ್ ಲೀಡರ್ ಶಿಪ್ ಡೆವಲಪ್‌ಮೆಂಟ್''[೬೪] ಎಂಬ ಪುಸ್ತಕದಲ್ಲಿ ರಾಜಕೀಯ ಬದಲಾವಣೆಯಲ್ಲಿ ಗಣ್ಯರ ಪಾತ್ರ, ಅವರ ಕಾರ್ಯ ವಿವರಿಸುತ್ತದೆ, ಅಲ್ಲದೇ ಆರ್ಥಿಕ, ಸಾಮಾಜಿಕ, ರಾಜಕೀಯ ಬದಲಾವಣೆಯಲ್ಲಿ ಭಾರತ ಮತ್ತು ಆಫ್ರಿಕಾದ ಪಾತ್ರ ಕುರಿತು ವಿವರಿಸಲಾಗಿದೆ.

ಇಕ್ಬಾಲ್ ನಾರಾಯಣ ಮತ್ತು ಪಿ.ಸಿ.ಮಥೂರ್ ರವರ "ಪೋಲಿಟಿಕ್ಸ್ ಇನ್ ಚೆಂಜಿಂಗ್ ಇಂಡಿಯಾ"[೬೫] ಎಂಬ ಪುಸ್ತಕದಲ್ಲಿ ಭಾರತದ ಪಕ್ಷ ಪದ್ಧತಿಯಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ ಅಭಿವೃದ್ಧಿ ಹಾಗೂ ನಗರ ಸರ್ಕಾರಗಳ ಅಭಿವೃದ್ಧಿ ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ಅಭಿವೃದ್ಧಿ ರಾಜಕೀಯ ಕುರಿತು ವಿವರಿಸಲಾಗಿದೆ.

ಎಚ್.ಎಸ್.ಬಾಟಿಯಾ ರವರ "ಒರಿಜಿನ್ ಆ್ಯಂಡ್ ಡೆವಲಪ್‌ಮೆಂಟ್ ಆಫ್ ಪೋಲಿಟಿಕಲ್ ಸಿಸ್ಟಿಮ್ ಇನ್ ಇಂಡಿಯಾ"[೬೬] ಎಂಬ ಪುಸ್ತಕದಲ್ಲಿ ಭಾರತದಲ್ಲಿ ಅಭಿವೃದ್ಧಿ ರಾಜಕೀಯದ ಬೆಳವಣಿಗೆ,

ಕಾನೂನು, ಅಧಿಕಾರಿ ಮತ್ತು ಕಾರ್ಯಗಳನ್ನು ತಿಳಿಸುತ್ತದೆ, ಅಲ್ಲದೇ ರಾಜಕೀಯ ಪದ್ಧತಿಯಲ್ಲಿ ಆರ್ಥಿಕ, ಸಾಮಾಜಿಕ ಬೆಳವಣಿಗೆ ಕುರಿತು ತಿಳಿಸುತ್ತದೆ.

ಹೆನ್ರೀ ಡರ್ಕ್‌ರ್ ಆಂಡ್ರೀವ್ ಗ್ಯಾಂಬರ್ ಗಿಲೀನ್ ರವರ "ಡೆವಲಪ್‌ಮೆಂಟ್ ಇನ್ ಬ್ರಿಟೀಷ್ ಪೋಲಿಟಿಕ್ಸ್"[೧೭] ಎಂಬ ಪುಸ್ತಕದಲ್ಲಿ ಆರ್ಥಿಕ, ಸಾಮಾಜಿಕ ನೀತಿ, ವಿದೇಶಾಂಗ ನೀತಿ ಕುರಿತು ವಿವರಿಸುತ್ತದೆ. ಅಲ್ಲದೇ ಸ್ಥಳೀಯ ಸರ್ಕಾರ ಮತ್ತು ನಗರ ಸರ್ಕಾರಗಳಲ್ಲಿಯ ರಾಜಕೀಯ ವ್ಯವಸ್ಥೆ ತಿಳಿಸುತ್ತದೆ.

ಸ್ವಾಮಿ ರಂಗನಾಥನಂದ "ಪೋಲಿಟಿಕ್ಸ್ ಆಂಡ್ ಎಡ್ಮಿನಿಸ್ಟ್ರೇಶನ್ ಫಾರ್ ಟೋಟಲ್ ಹ್ಯೂಮನ್ ಡೆವಲಪ್‌ಮೆಂಟ್"[೧೮] ಎಂಬ ಪುಸ್ತಕದಲ್ಲಿ ರಾಷ್ಟ್ರಗಳ ಆಡಳಿತದಲ್ಲಿ ಧರ್ಮ, ಆರ್ಥಿಕ, ಸಾಮಾಜಿಕ, ರಾಜಕೀಯದ ಬೆಳವಣಿಗೆಯ ಪ್ರಭಾವ ಹಾಗೂ ಅಭಿವೃದ್ಧಿ ರಾಜಕೀಯದಲ್ಲಿ ನಾಗರಿಕರ ತೊಂದರೆಗಳನ್ನು ಕುರಿತು ವಿವರಿಸುತ್ತದೆ.

ಪೌಲ್ ಆರ್. ಬ್ರಾಸ್ ರವರ "ದಿ ಪೋಲಿಟಿಕ್ಸ್ ಆಫ್ ಇಂಡಿಯಾ ಸೀನ್ಸ್ ಇಂಡೆಪೆಂಡನ್ಸ್"[೧೯] ಎಂಬ ಪುಸ್ತಕದಲ್ಲಿ ರಾಜ್ಯ ಸರ್ಕಾರ ಮತ್ತು ಸ್ಥಳೀಯ ಸರ್ಕಾರಗಳಲ್ಲಿ ರಾಜಕೀಯದ ಬದಲಾವಣೆ ಹಾಗೂ ಆರ್ಥಿಕ, ಸಾಮಾಜಿಕ, ರಾಜಕೀಯದ ಬೆಳವಣಿಗೆ ಕುರಿತು ವಿವರಿಸುತ್ತದೆ.

ಲೇಸಲೇ ಲೀಪ್ಸನ್ ರವರ "ದಿ ಗ್ರೇಟ್ ಇಸ್ಯುಜ್ ಆಫ್ ಪೋಲಿಟಿಕ್ಸ್"[೨೦] ಎಂಬ ಪುಸ್ತಕದಲ್ಲಿ ರಾಜಕೀಯ ಬೆಳವಣಿಗೆಯಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯ ನಡುವಿನ ಸಂಬಂಧವನ್ನು ತಿಳಿಸುತ್ತದೆ. ಮುಂದುವರೆದು, ಈ ನಿಟ್ಟಿನಲ್ಲಿ ವಿಷಯ ಸಂಬಂಧಿಸಿದ ಜರ್ನಲ್ಸ್‌ಗಳನ್ನು ಅಧ್ಯಯಿಸಿದಾಗ ದೊರಕಿದ ಲೇಖನ, ಸಂಶೋಧನಾ ಲೇಖನ, ಚಾರಿತ್ರಿಕ ಲೇಖನಗಳ ವಿಮರ್ಶೆ ಸಹ ಇಲ್ಲಿ ನೀಡಲಾಗಿದೆ.

ಸಿ.ಪಿ. ಬಂಬಾಲಿಯವರ "ಅರ್ಬನ್ ಪ್ಲಾನಿಂಗ ಆಂಡ್ ಲೋಕಲ್ ಅಥಾರಿಟೀಸ್"[೨೧] ಎಂಬ ಲೇಖನದಲ್ಲಿ ಮುನಿಸಿಪಲ್ ಸಂಸ್ಥೆಗಳಿಗೆ ಬರುವ ಆದಾಯ ,ಆಡಳಿತ ಮತ್ತು ಸ್ಥಳೀಯ ಸರಕಾರಗಳ ಅಧಿಕಾರ ಮತ್ತು ನಗರ ಸರಕಾರಗಳ ಯೋಜನೆ ಕುರಿತು ವಿವರಿಸಲಾಗಿದೆ.

ಅಶೋಕ ಮುಖ್ಯೋಪಾಧ್ಯಾಯರವರ "ಮುನಿಸಿಪಲ್ ಪರಸನಲ್ ಎಡ್ಮಿನಿಸ್ಟ್ರೇಶನ್"[೨೨] ಎಂಬ ಲೇಖನದಲ್ಲಿ ಮುನಿಸಿಪಲ್ ಸರಕಾರಗಳ ಆಡಳಿತ ವ್ಯವಸ್ಥೆ ಅವುಗಳ ಕಾರ್ಯಗಳನ್ನು ವಿವರಿಸುತ್ತದೆ.

ಹರಿದ್ವಾರ ರಾಯರ್ ರವರ "ಲೋಕಲ್ ಗೌರ್ನಮೆಂಟ್ ಎಡ್ಮಿನಿಸ್ಟ್ರೇಶನ್ ಡೆವಲಪ್‌ಮೆಂಟ್"[೨೩] ಲೇಖನದಲ್ಲಿ ಬ್ರಿಟೀಷ್ ಸರಕಾರದ ಆಳ್ವಿಕೆಯಲ್ಲಿ ಸ್ಥಾನಿಕ ಸರಕಾರಗಳ ಬೆಳವಣಿಗೆ ಮತ್ತು ದ್ವಿದಳ ಸರ್ಕಾರ ಪದ್ಧತಿಯ ಬಗ್ಗೆ ವಿವರಿಸಲಾಗಿದೆ.

ವಿಜಯರಾಜನ್ ದತ್ತ ರವರ "ದಿ ಸೆಂಟ್ರಲೈಜೆಶೆನ್ ಆಂಡ್ ಪೋಲಿಟಿಕಲ್ ಡೆವಲಪ್‌ಮೆಂಟ್ ಇನ್ ಇಂಡಿಯಾ"[೭೪] ಲೇಖನದಲ್ಲಿ ವಿಕೇಂದ್ರಿಕರಣದ ಅವಶ್ಯಕತೆ ಮತ್ತು ರಾಜಕೀಯ ಸಂಸ್ಥೆಗಳ ಬೆಳವಣಿಗೆಯನ್ನು ಕುರಿತು ವಿವರಿಸಲಾಗಿದೆ.

ಎಚ್.ಡಿ.ಕೋಪ್ಪರದೇಖರವರ "ದಿ ಅಲ್ ಇಂಡಿಯಾ ಲೋಕಲ್ ಸೇಲ್ಪ್ ಗೌರ್ನಮೆಂಟ್"[೭೫] ಎಂಬ ಲೇಖನದಲ್ಲಿ ಮುನಿಸಿಪಲ್ ಸರ್ಕಾರಗಳ ಆಡಳಿತ, ವ್ಯವಸ್ಥಾಪನೆ ಮತ್ತು ನಗರ ಸರ್ಕಾರಗಳ ಅಭಿವೃದ್ಧಿ ಕುರಿತು ವಿವರಿಸಲಾಗಿದೆ.

ಡಿ.ರಾಜದಯಾಕ್ಷರವರ "ಲೋಕಲ್ ಸೇಲ್ಪ್ ಗೌರ್ನಮೆಂಟ್ ಇನ್ಸಟ್ಯೂಟ್"[೭೬] ಎಂಬ ಲೇಖನದಲ್ಲಿ ಬಿಹಾರ ರಾಜ್ಯದಲ್ಲಿ ಮುನಿಸಿಪಲ್ ಸರ್ಕಾರಗಳ ಆಡಳಿತ ವ್ಯವಸ್ಥೆ, ಕೌನ್ಸಿಲರ ಪಾತ್ರ ಮತ್ತು ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಕುರಿತು ವಿವರಿಸಲಾಗಿದೆ.

ಆರ್. ಎನ್. ಸೆಕ್ಸೆನಾರವರ "ಏಕನಾಮಿಕ್ ಡೆವಲಪ್‌ಮೆಂಟ್ ಆಫ್ ಇಂಡಿಯಾ"[೭೭] ಎಂಬ ಲೇಖನದಲ್ಲಿ ಅಭಿವೃದ್ಧಿ ರಾಜಕಿಯದಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯ ಅಭಿವೃದ್ಧಿ ಕುರಿತು ವಿವರಿಸಲಾಗಿದೆ.

ಇಲ್ತಿಜಾ, ಎಚ್. ಖಾನರವರ "ದಿ ಪೋಲಿಟಿಕ್ಸ್ ಆಫ್ ಡೆವಲಪ್‌ಮೆಂಟ್"[೭೮] ಎಂಬ ಲೇಖನದಲ್ಲಿ ಅಭಿವೃದ್ಧಿ ರಾಜಕೀಯದಲ್ಲಿ ಗಣ್ಯರ ಪಾತ್ರ ಮತ್ತು ಸಾಮಾಜಿಕ, ಆರ್ಥಿಕ, ರಾಜಕೀಯ ಬೆಳವಣಿಗೆ ಕುರಿತು ವಿವರಿಸಲಾಗಿದೆ.

ಈಕ್ಬಾಲ್ ನಾರಾಯಣ ರವರ "ಡೆಮೋಕ್ರಟಿಕ್ ಡಿ ಸೇಂಟ್ರಲೈಜನ್ ದಿ ಪಿಡಿಯಾ ದಿ ಇಮೇಜ್ ಆಂಡ್ ದಿ ರಿಯಾಲಿಟಿ"[೭೯] ಎಂಬ ಲೇಖನದಲ್ಲಿ ವಿಕೇಂದ್ರಕರಣದ ಅವಶ್ಯಕತೆ ಮತ್ತು ಪ್ರಜಾಪ್ರಭುತ್ವದ ತಾಯಿ ಬೇರಿನಂತಿರುವ ನಗರ ಸರ್ಕಾರಗಳ ಮಹತ್ವ ವಿವರಿಸಲಾಗಿದೆ.

### ಸಮಾರೋಪ :

ಈ ರೀತಿಯಾಗಿ ಹಲವಾರು ಸಾಹಿತ್ಯದ ಪುನರಾವಲೋಕನ ಮಾಡಿದಾಗ ಸಹ ಪುರಸಭೆ ಅಭಿವೃದ್ಧಿಯ ಬಗ್ಗೆ ಬಹಳಷ್ಟು ಸಂಶೋಧನೆಗಳು ನಡೆದಿಲ್ಲ ಎಂಬುದು ಕಂಡುಬಂದ್ದಿದು, ಅದಕ್ಕಾಗಿ ಈ ಜಮಖಂಡಿ ಪುರಸಭೆಯ ಅಭಿವೃದ್ಧಿಯ ಮೇಲೆ ಹೆಚ್ಚಿನ ಒತ್ತನ್ನು ನೀಡಿ ಈ ಜಮಖಂಡಿ ಪುರಸಭೆಯ ಅಭಿವೃದ್ಧಿಯ ಅಧ್ಯಯನವನ್ನು ನಮ್ಮ ಸಂಪ್ರಬಂಧಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**ಕೊನೆ ಟಿಪ್ಪಣಿಗಳು :**


೧. ಅಲಿ ಅಶ್ರಫ್ ಗವರ್ನಮೆಂಟ್ ಆ್ಯಂಡ್ ಪೊಲಿಟಿಕ್ಸ್ ಆಫ್ ಬಿಗ್ ಸಿಟೀಸ್, ಕಾನ್ಸೆಪ್ಟ್ ಪಬ್ಲಿಶಿಂಗ ಕಂಪನಿ ದೆಹಲಿ. ೧೯೭೭

೨. ಹೆರಿಂಗ್ಟನ್ ಜೆ.ಬ್ರೈಸ್ ಅರ್ಬನ್ ಗವರ್ನಮೆಂಟ್ ಆಂಡ್ ಮೈನಾರಿಟೀಸ್, ಪ್ರಿಯಜರ್ ಪಬ್ಲಿಶರ್ ನ್ಯೂಯಾರ್ಕ ೧೯೭೬

೩. ಎಡ್‌ವರ್ಡ ಸಿ ಬ್ಯಾನ್‌ಫೆಲ್ಡ್ ಅರ್ಬನ್ ಗವರ್ನಮೆಂಟ್, ದಿ ಫ್ರಿ ಪ್ರೆಸ್ ಆಂಡ್ ಗ್ಲಿನಕೊಂ ಕಂಪನಿ ೧೯೬೨.

೪. ಶ್ರೀ ಆರ್.ಜಿ. ಜಂಗಮ್ ಮತ್ತು ಬಿ.ಎ.ವ್ಹಿ ಶರ್ಮಾ. ಲೀಡರ್‌ಶಿಪ್ ಇನ್ ಅರ್ಬನ್ ಗವರ್ನಮೆಂಟ್, ಸ್ಟಕ್ಲಿಂಗ್ ಪಬ್ಲಿಕೇಶನ್ ಪ್ರೈ–ಲಿಮಿಟೆಡ್. ನ್ಯೂ ದೆಹಲಿ

೫. ಮಾಹಿತ ಬಟ್ಟಾಚಾರ್ಯ ಮೆನೆಜ್‌ಮೆಂಟ್ ಆಫ್ ಅರ್ಬನ್ ಗವರ್ನಮೆಂಟ್, ಉಪ್ಪಳ ಬುಕ್ ಹೌಸ್ ನ್ಯೂ ದೆಹಲಿ–೧೯೭೬

೬. ಬಾಂಬೆ ಡಿಸ್ಟ್ರಿಕ್ಸ್ ಮುನಿಸಿಪಾಲಿಟಿ ಆಕ್ಟ ೧೯೦೧ ರ ಗದಗ–ಬೆಟಗೇರಿ ಮುನಿಸಿಪಾಲಿಟಿ ಪ್ರಿಟಿಂಗ್ ಹೌಸ್ ಮೌಂಟ್ ರೋಡ್ ಮದ್ರಾಸ್ ೧೯೨೧

೭. ಜೆಮ್ಸ್ ಇ ಪೆಟ್. ಲೋಕಲ್ ಗವರ್ನಮೆಂಟ್ ಆಂಡ್ ಎಡ್ಮಿನಿಸ್ಟ್ರೆಶನ್, ಅಮೇರಿಕನ್ ಬುಕ್ ಕಂಪನಿ, ನ್ಯೂಯಾರ್ಕ.೧೯೫೪

೮. ಕಾರ್ಲಮಾರ್ಕ್ಸ ಕ್ಯಾಂಡಲಿಸ್, ಅರ್ಬನ್ ಗವರ್ನಮೆಂಟ್ ಆಂಡ್ ಪೋಲಿಟಿಕ್ಸ್ ಮ್ಯಾಕಗ್ರೊ ಹಿಲ್ ಕಂಪನಿ, ನ್ಯೂಯಾರ್ಕ ೧೯೯೦.

೯. ಹೆಚ್.ಡಿ.ಶೌರಿ, ಆರ್ಟ್ಸ್ ಇಂಡೀಸ್, ಇಂಡಿಯನ್ ಬುಕ್ ಕಂಪನಿ ಲಿಮಿಟೆಡ್, ಲಾಹೋರ್ ೧೯೪೭.

೧೦. ಆರ್.ಎನ್.ಶರ್ಮಾ ಮತ್ತು ದೇವೇಂದ್ರಕುಮಾರ ಮುನಿಸಿಪಲ್ ಗವರ್ನಮೆಂಟ್ ಇನ್ ಇಂಡಿಯಾ ಚಾಲುಕ್ಯ ಪ್ರಿಂಟರ್ಸ್, ನ್ಯೂ ಡೆಲ್ಲಿ ೧೯೮೧.

೧೧. ಎ.ಅವಸ್ಥೆ ಅರ್ಬನ್ ಗವರ್ನಮೆಂಟ್ ಇನ್ ಇಂಡಿಯಾ, ಲಕ್ಷ್ಮೀನಾರಾಯಣ ಅಗರವಾಲ, ಆಗ್ರಾ ೧೯೭೨.

೧೨. ಎಂ.ಪಿ.ಶರ್ಮಾ ಲೋಕಲ್ ಸೆಲ್ಪ ಗವರ್ನಮೆಂಟ್ ಇನ್ ಇಂಡಿಯಾ–ಅಲಹಾಬಾದ ಕಿತಾಬ ಮಹಲ್ ೧೯೬೫.

೧೩. ಎಂ.ಬಿ.ಭಾರ್ಗವ–ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಇಂಡಿಯಾ ಪಬ್ಲಿಶಿಂಗ್ ಹೌಸ ಲಕ್ನೋ ೧೯೩೬

೧೪. ಆಶಿರ್ವತಿಮ್ ದಿ ರೋಲ್ ಆಟ್ ಲೋಕಲ್ ಸೆಲ್ಪ ಗವರ್ನಮೆಂಟ್ ಇನ್ ಓ ಡೆಮಾಕ್ರಸಿ ಇಂಡಿಯನ್ ಜರ್ನಲ್ ಆಟ್ ಪೋಲಿಟಿಕಲ್ ಸೈನ್ಸ ೧೯೫೫( ಜುಲೈ–ಸೆಪ್ಟೆಂಬರ್)

೧೫. ಭಡೆ, ಜೆ.ಎಸ್. ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಸ್ಟಿಟ್ಯೂಟ್ಸ್ ೧೯೬೭.

೧೬. ಪ್ರೋ. ಕೆ.ಎನ್.ಸಿಂಗ್ ಎ ಸಿಂಪಲ್ ಸ್ಥಡಿ ಆಪ್ ಎಡ್ಮಿನಿಸ್ಟ್ರೇಶನ್ ಇನ್ ಇಂಡಿಯಾ, ಪರಿಮಳ ಪ್ರಕಾಶನ ಔರಂಗಾಬಾದ್ ೧೯೭೭.

೧೭. ಅಪ್ಪರಾವ್.ಟಿ. ಮುನಿಸಿಪಾಲಿಟಿ ಇಟ್ಸ್ ಸಿಗ್ನಿಫಿಕನ್ಸ್ ಮಿನಿಂಗ್ ಪರ್ಪಸ್ ಅಂಡ್ ಇಂಫಾರ್ಟೆಂಟ್ಸ್ ಆಟ್ ಮುನಿಸಿಪಲ್ ಗವರ್ನಮೆಂಟ್, ಸಿವಿಕೆ ಅಪೆಕ್ಸ್ ಜನೇವರಿ ೧೯೬೪.

೧೮. ಶಾಂತಾರಾಮ್ ಕೆ.ಜೊಗ್ಲೆ ಲೋಕಲ್ ಗವರ್ನಮೆಂಟ್ಸ್ ಆಂಡ್ ಎಡ್ಮಿನಿಸ್ಟ್ರೇಶನ್ ಇನ್ ಇಂಡಿಯಾ, ಪರಿಮಳ ಪ್ರಕಾಶನ ಔರಂಗಾಬಾದ ೧೯೭೭.

೧೯. ಬಿ.ಎನ್.ಭಾರ್ಗವ ಮತ್ತು ರಾಮರಾವ ಇಂಡಿಂಯನ್ ಲೋಕಲ್ ಗವರ್ನಮೆಂಟ್ ಅಸೋಸಿಯೇಟ್ಸ್ ಪಬ್ಲಿಕೇಶನ್ಸ್ ಪ್ರೈ ಲಿಮಿಟೆಡ್, ಕಲ್ಕತ್ತಾ ೧೯೭೮.

೨೦. ಚಂದ್ರಪ್ರಕಾಶ ಭಾಂಬರಿ ಮುನಿಸಿಪಾಲಿಟಿ ಆಂಡ್ ದೇ ಅರ್ ಫೈನಾನ್ಸ್, ಪದ್ಮಾ ಬುಕ್ ಹೌಸ್.೧೯೭೮

೨೮. ಶ್ರೀರಾಮ ಮಹೇಶ್ವರಿ, ಲೋಕಲ್ ಗವರ್ನಮೆಂಟ್ ಇನ್ ಇಂಡಿಯಾ ಒರಿಯಂಟ್ ಲಾಂಗಮನ್ ಲಿ.೧೯೭೧.

೨೧. ಎಂ.ವೆಂಕಟರಂಗಯ್ಯ ಮತ್ತು ಎಂ.ಪಟ್ಟಾಭಿರಾಮ್, ಲೋಕಲ್ ಗವರ್ನಮೆಂಟ್ ಇನ್ ಇಂಡಿಯಾ, ಸೆಲೆಕ್ಟೆಡ್ ರೀಡಿಂಗ್, ಕಲ್ಕತ್ತಾ ೧೯೬೭.

೨೨. ಆರ್.ಎನ್.ಶರ್ಮಾ ಮತ್ತು ದೇವೇಂದ್ರಕುಮಾರ, ಮುನಿಸಿಪಲ್ ಗವರ್ನಮೆಂಟ್ ಇನ್ ಇಂಡಿಯಾ, ಚಾಲುಕ್ಯ ಪ್ರಿಂಟರ್ಸ್ ನವದೆಹಲಿ ೧೯೮೧.

೨೩. ಅರ್ಥರ್ ಡಬ್ಲು ಬ್ರೊಡ್ರೂಗ್ ರವರ ಇಂಟ್ರೊಡಕ್ಷನ್ ಟು ಮುನಿಸಿಪಲ್ ಗವರ್ನಮೆಂಟ್ ಆಂಡ್ ಎಡ್ಮಿನಿಶ್ಟ್ರೇಶನ್ ಅಪರೇಶನ್ ಸೆಂಚುರಿ. ಐ.ಎನ್.ಸಿ. ಯು.ಎಸ್.ಎ. ೧೯೫೦-೬.

೨೪. ಮೊಹಿತ್ ಭಟ್ಟಾಚಾರ್ಯ ಸ್ಟೇಟ್ ಮುನಿಸಿಪಲ್ ರಿಲೇಶನ್ಸ್ ದಿ ಇಂಡಿಯಾ ಇನ್ ಸ್ಟಿಟ್ಯೂಟ್ ಆಫ್ ಪಬ್ಲಿಕ್ ಎಡ್ಮಿನಿಸ್ಟ್ರೇಶನ್ ನವದೆಹಲಿ ೧೯೭೨.

೨೫. ಪ್ರತಾಪ್‌ಸಿಂಗ್, ಅರ್ಬನ್ ಗವರ್ನಮೆಂಟ್ ಇನ್ ಇಂಡಿಯಾ, ಉಪ್ಪಳ ಪಬ್ಲಿಷಿಂಗ್ ಹೌಸ್,ನವದೆಹಲಿ ೧೯೭೮.

೨೬. ನಾಯರ್ ಟಿ.ಎಂ. ಫ್ರಿನ್ಸಿಪಲ್ ಆಂಡ್ ಪ್ರಾಕ್ಟೀಸ್ ಆಫ್ ಮುನಿಸಿಪಲ್ ಗವರ್ನಮೆಂಟ್ ಮದ್ರಾಸ್ ೧೯೧೬

೨೭. ರಾವ್ ಫೈನಾನ್ಸ್ ಅಂಡ್ ಮುನಿಸಿಪಾಲಿಟಿ ಇನ್ ನಾರ್ಥ ಕೆನರಾ ಡಿಸ್ಟ್ರಿಕ್ಟ್.

೨೮. ಪಂಡಿತ್ ವಿಜಯಲಕ್ಷ್ಮೀ ಎ.ಲಿವ್ಸ್ ಅಂಡ್ ಅರ್ಬನ್ ಪೋಲಿಟಿಕ್ಸ್ ಕೇಸ್ ಸ್ಟಡಿ ಆಫ್ ಡೆಲ್ಲಿ, ಇಂಟರ್ ಇಂಡಿಯಾ ಡೆಲ್ಲಿ, ೧೯೮೪

೨೯. ಮುನಿಸಿಪಲ್ ಎನುವಲ್ ರಿಪೋರ್ಟ್, ಕರ್ನಾಟಕ ಹೆಲ್ತ್ ಅಂಡ್ ಮುನಿಸಿಪಲ್ ಎಡ್ಮಿನಿಸ್ಟ್ರೇಶನ್ ಡವಲಪ್‌ಮೆಂಟ್, ಗವರ್ನಮೆಂಟ್, ಮೈಸೂರು, ಮುನಿಸಿಪಾಲಿಟಿ ಆಕ್ಟ್ ೧೯೬೪, ಗವರ್ನಮೆಂಟ್ ಪ್ರೈಸ್, ಬೆಂಗಳೂರು ೧೯೭೭

೩೦. ಮೈಸೂರು ಲಾ ಡಿಪಾರ್ಟಮೆಂಟ್ ಮೈಸೂರು ಮುನಿಸಿಪಾಲಿಟಿ ಆಕ್ಟ್ ೧೯೬೪, ಗವರ್ನಮೆಂಟ್ ಪ್ರೈಸ್ ಬೆಂಗಳೂರು ೧೯೬೪.

೩೧. ಡಾ.ಗಂಗೂಲಿ, ವೋಟಿಂಗ್ ಬಿಹೇವಿಯರ್ ಇನ್ ಎ ಡವಲಪಿಂಗ್ ಸೊಸೈಟಿ ಸ್ಟೆರ್ಲಿಂಗ್ ಪಬ್ಲಿಕೇಶನ್ ಪ್ರೈ ಲಿಮಿಟೆಡ್ ದೆಹಲಿ ೧೯೭೫.

೩೨. ಡಾ.ಎಂ.ಎನ್. ಮಿಶ್ರಾ ಪೊಲಿಟಿಕ್ಸ್ ಆಫ್ ರಿಜಾನಿಲಿಜಂ ಇನ್ ಇಂಡಿಯಾ, ದೀಪ್ ಅಂಡ್ ದೀಪ ಪಬ್ಲಿಕೇಶನ್ ನವದೆಹಲಿ ೧೯೮೮.

೩೩ ಎಸ್.ಎನ್. ಸದಾಶಿವನ್, ಪಾರ್ಟಿ ಆಂಡ್ ಡೆಮಾಕ್ರಸಿ ಇನ್ ಇಂಡಿಯಾ, ಟಾಟಾ ಮಾಕ್ ಗ್ರೊ ಹಿಲ್, ಪಬ್ಲಿಕೇಶನ್, ಕಂ. ಲಿ. ನವದೆಹಲಿ, ೧೯೭೭.

೩೪. ಎನ್.ಪಿ. ವರ್ಮಾ ಮತ್ತು ನಾಯರ್ ವೋಟಿಂಗ ಬಿಹೇವಿಯರ್ ಇನ್ ಎಕ್ಸಚೇಂಜಿಂಗ ಸೋಸೈಟಿ, ನ್ಯಾಶನಲ್ ಡೆಲ್ಲಿ, ೧೯೭೩.

೩೫. ವಿಶ್ವಜಿತ್ ಬ್ಯಾನರ್ಜಿ, ರೊರಲ್ ಟು ಅರ್ಬನ್ ಮ್ಯಾಗ್ರೇಶನ್ ಆಂಡ್ ದಿ ಅರ್ಬನ್ ಲೇಬರ ಮಾರ್ಕೆಟ ಹಿಮಾಲಯ ಪಬ್ಲಿಶಿಂಗ್ ಹೌಸ, ನ್ಯೂ ಡೆಲ್ಲಿ, ೧೯೮೬.

೩೬. ಎಸ್. ಡಬ್ಲು ಸಿನ್ ಕ್ಲೈರ್ ಅರ್ಬನೈಜೇಶನ್ ಆಂಡ್ ಲೇಬರ್ ಮಾರ್ಕೆಟಿಂಗ್ ಇನ್ ಡೆವಲಪಿಂಗ್ ಕಂಟ್ರೀಸ್, ಕ್ರೋಮ್ ಹೆಲ್ಥ ಲಂಡನ್, ೧೯೭೮.

೩೭. ಕೆ.ಎನ್. ಗೋಪಿ, ಪ್ರೊಸೆಸ ಆಟ್ ಅರ್ಬನ್ ಡೆವಲಪ್‌ಮೆಂಟ್ ಎ ಮಾಡೆಲ್, ಕಾನ್‌ಸೆಪ್ಟ ಪಬ್ಲಿಶಿಂಗ ಕಂಪನಿ, ದೆಹಲಿ, ೧೯೭೭.

೩೮. ಸ್ಮಿಥ ಸ್ಯಾಡತ್ ರಿಸ್ಟರ್, ರಿಯಲ್ ಎಸ್ಟೇಟ್ ಆಂಡ್ ಅರ್ಬನ್ ಡೆವಲಪ್‌ಮೆಂಟ ರಿಸರ್ಚ ಇನ್ ಇರ್ವಿನ್ ಐ.ಎನ್.ಸಿ ಜಾರ್ಜಟನ್, ೧೯೭೭.

೩೯. ಹೆಚ್.ಡಿ. ಕೊರ್ಪಕರ್, ಸೋಸಿಯಲ್ ಅಸ್ಪೆಕ್ಟ್ಸ್ ಆಫ್ ಅರ್ಬನ್ ಡೆವಲಪ್‌ಮೆಂಟ, ಪಾಪುಲರ್ ಪ್ರಕಾಶನ್,

೪೦. ಎ.ಜಿ. ನೊಬೆಲ್ ಆಂಡ್ ಅಶೋಕ ದತ್ತ, ಇಂಡಿಯನ್ ಅರ್ಬನೈಜೆಶನ್ ಆಂಡ್ ಪ್ಲಾನಿಂಗ್ ವೆಕೆಲ್ಸ್ ಆಟ್ ಮಾಡರ್ನೈಜೇಶನ್, ಟಾಟಾ ಮಾಗ್ರೋಹಿಲ್, ಕಂ.ಲಿ. ನ್ಯೂ ಡೆಲ್ಲಿ ೧೯೭೭.

೪೧. ಎಸ್.ಬಿ. ಹೆರ್ರಿಕ್ ಆಂಡ್ ಬಿ. ಹಡಸನ್ ಅರ್ಬನ್ ಪಾವರ್ಟಿ ಆಂಡ್ ಎಕನಾಮಿಕ್ ಡವಲಪ್‌ಮೆಂಟ್, ದಿ ಮ್ಯಾಕಮಿಲನ್ ಪ್ರೆಸ್ ಲಿ. ಲಂಡನ್, ೧೯೮೧.

೪೨. ಪವರ್ ವೈಜೊವಸ್ಕಿ ಆಂಡ್ ಮಾಫ್ಲಿನ್ ಸ್ಟ್ಯಾಂಜರ್ಮ ಕರೆಂಟ್ ಇಸ್ಯೂಸ್ ಇನ್ ಅರ್ಬನ್ ಎಕನಾಮಿಕ್ ದಿ ಜಾನ್ಸ್ ಹಾಟಕಿನ್ಸ್ ಯುನಿ ಪ್ರೆಸ್, ಲಂಡನ್, ೧೯೭೯.

೪೩. ಬ್ರೈನ್ ಗೊಡೆಲ್ ದಿ ಎಕನಾಮಿಕ್ಸ್ ಅರ್ಬನ್ ಏರಿಯಾ, ಪ್ರೋಗ್ರಾಮ ಪ್ರೆಸ್, ನ್ಯೂಯಾರ್ಕ, ೧೯೭೨.

೪೪. ದಿ.ಎಲ್.ಎನ್. ಪ್ರಕಾಶರಾವ್, ಅರ್ಬನೈಜೇಶನ್ ಇನ್ ಇಂಡಿಯಾ ಕಾನ್‌ಶಪ್ಟ್ ಪಬ್ಲಿಷಿಂಗ್ ಕಂಪನಿ, ನ್ಯೂ ಡೆಲ್ಲಿ, ೧೯೮೩.

೪೫. ಡಿ.ವಾಸುದೇವರಾವ್, ಅರ್ಬನ್ ಡೆವಲಪ್‌ಮೆಂಟ್ ಪ್ರಾಬ್ಲಮ್ಸ್ ಲನ್ಸರ್ಸ್ ಬುಕ್ಸ್, ಡೆಲ್ಲಿ, ೯೦.

೪೬. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಎಡ್ಮಿನಿಸ್ಟ್ರೇಶನ್, ನ್ಯೂ ಡೆಲ್ಲಿ, ಅರ್ಬನ್ ಡೆವಲಪ್‌ಮೆಂಟ್ ಅಥಾರಿಟಿ, ೧೯೭೮.

೪೭. ಡಗ್ಲಸ್ ಎಂ.ಬ್ರೈನ್ ಇಂಟ್ರುಡಕ್ಷನ್ ಟು ಅರ್ಬನ್ ಎಕನಾಮಿಕ್ಸ್ ಅಕಾಡೆಮಿಕ್ ಪ್ರೆಸ್, ನ್ಯೂಯಾರ್ಕ, ಲಂಡನ್, ೧೯೭೪.

೪೮. ಶರ್ಮಾ. ಬಿ.ವಿ. ಅಂಡ್ ಆರ್.ಟಿ.ಜಂಗಮ, ದಿ ಬಾಂಬೆ ಮುನಿಸಿಪಲ್ ಕಾರ್ಪೋರೇಶನ್ ಆನ್ ಎಲೆಕ್ಷನ್ ಸ್ಟಡಿ, ಪಾಪುಲರ್ ಪಬ್ಲಿಷಿಂಗ್, ಬಾಂಬೆ, ೧೯೬೨

೪೯. ಅಪ್ಪಾರಾವ್.ಡಿ ಪಾರ್ಟೀಸ್ ಅಂಡ್ ಪೋಲಿಟಿಕ್ಸ್ ಇನ್ ದಿ ಕಾರ್ಪೇರೇಶನ್ ಆಫ್ ಹೈದರಾಬಾದ್. ವ.೪೫ ಜನೇವರಿ, ಮಾರ್ಚ್,೧೯೭೫, ಪುಟ, ೪೧೧–೧೮.

೫೦. ಭಡೆ ಜಿ.ಎಸ್. ಮತ್ತು ಎಂ.ಯು. ರಾವ್ ಬಾಂಬೆ ಸಿವಿಕ್ ಎಲೆಕ್ಷನ್. ಜುಲೈ, ಸಪ್ಟಂಬರ್, ಪುಟ ೧–೨೦

೫೧ ದಿ ಪೋಲಿಟಿಕಲ್ ಪಾರ್ಟೀಸ್ ಇನ್ ಲೋಕಲ್, ಬಾಡಿಸ್ ಬಾಂಬೆ ಸಿವಿಕ್ ಜರ್ನಲ್ ವಾಲ್ಯೂಮ್ ೫ ಜನೇವರಿ ೧೯೫೯ ಪುಟ, ೨೩

೫೨. ಶೀರಾಮ ಮಹೇಶ್ವರಿ, 'ಲೋಕಲ್ ಗೌರ್‍ನಮೆಂಟ್ ಇನ್ ಇಂಡಿಯಾ', ಓರಿಯಂಟ್ ಲಾಂಗಮನ್ ಲಿಮಿಟೆಡ್, ೧೯೭೧

೫೩. ಡಾ.ಶಾಂತರಾಮ್.ಕೆ. ಭೋಗ್ಲೆ, 'ಲೋಕಲ್ ಗೌರ್‍ನಮೆಂಟ್ ಅಂಡ್ ಎಡ್ಮಿನಿಸ್ಟ್ರೇಶನ್ ಇನ್ ಇಂಡಿಯಾ', ಔರಂಗ್‌ಬಾದ್, ಪರಿಮಳ ಪ್ರಕಾಶನ, ೧೯೭೮

೫೪. ಬಡೆ.ಜಿ.ಎಸ್. "ಲೋಕಲ್ ಸೇಲ್ಫ್ ಗೌರ್‍ನಮೆಂಟ್ ಇನ್ ಇಂಡಿಯಾ", ಕ್ವಾಲಿಟ್ ಜರ್ನಲ್ ಆಫ್ ದಿ ಲೋಕಲ್ ಸೇಲ್ಫ್ ಇನ್ಸ್ಯಟ್ಯೂಟ್, ೩೧:೪, ೧೯೬೭

೫೫. ಎಮ್.ಬಿ.ಬಾರ್ಗವ, 'ಲೋಕಲ್ ಸೇಲ್ಫ್ ಗೌರ್‍ನಮೆಂಟ್ ಇನ್ ಇಂಡಿಯಾ', ಲಕನೌ, ಅಪ್ಪರ್ ಇಂಡಿಯಾ ಪಬ್ಲಿಷಿಂಗ್ ಹೌಸ್, ೧೯೭೬

೫೬. ಎ.ಅವಸ್ತಿ, 'ಅರ್ಬನ್ ಗೌರ್‍ನಮೆಂಟ್ ಇನ್ ಇಂಡಿಯಾ', ಆಗ್ರಾ ಲಕ್ಷ್ಮೀನಾರಾಯಣ ಅಗರವಾಲ–೧೯೭೨.

೫೭. ಎಂ.ಫಿ.ಶರ್ಮಾ, "ಲೋಕಲ್ ಗೌರ್‍ನಮೆಂಟ್ ಇನ್ ಇಂಡಿಯಾ", ಅಲಹಾಬಾದ್ ಕಿತಾಬ್ ಮಹಲ್,೧೯೬೫

೫೮. ಅಪ್ಪಾರವ್ ಟಿ. 'ಮುನಿಸಿಪಾಲಿಟಿ ಇಟ್ಸ್ ಸಿಗ್ನಿಫಿಕೆನ್ಸ್ ಮಿನಿಂಗ್ ಪರ್ಪಜ ಅಂಡ್ ಇಂಪಾರ್ಟನ್ಸ್ ಆಫ್ ಮುನಿಸಿಪಲ್ ಗೌರ್‍ನಮೆಂಟ್', ಸಿವಿಕೆ ಅಫೇರ್ಸ್, ೧೧:೬–೧೯೬೪

೫೯. ಚಂದ್ರಪ್ರಕಾಶ ಬಾಂಬರಿ, "ಮುನಿಸಿಪಲ್ ಅಂಡ್ ದೇರ್ ಫೈನಾನ್ಸ್", ಪದ್ಮಾ ಬುಕ್ ಕಂಪನಿ, ಜೈಪುರ, ೧೯೬೯

೬೦. ಚೆನ್ನಬಸವಣ್ಣ ತೆವರಮೆಳ್ಳ ಹಳ್ಳಿ, 'ಸವಣೂರ ತಾಲೂಕ ದರ್ಶನ,' ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೭

೬೧. ಡಾ. ಸತೀಶ್ ಎಸ್.ಗವಾತಿ,' 'ದಿ ಇಂಪ್ಯಾಕ್ಟ್ ಆಫ್ ಎಕನಾಮಿಕ್ ಡೆವಲಪ್‌ಮೆಂಟ್ ಆನ್ ಪೋಲಿಟಿಕಲ್ ಪಾರ್ಟಿ ಸಿಫೆಶನ್ ಎ ಮೈಕ್ರೋ ಸ್ಟಡಿ,' ಹಿಮಾಲಯ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, ೨೦೦೦

೬೨. ಹೆರಾಲ್ಡ್ ಜಿಂಕ್,' 'ಮಾರ್ಡನ್ ಗೌರ್‍ನಮೆಂಟ್,' ಡಿವ್ಯಾನ ನ್ಯೂಸ್ಟ್ಯಾಂಡ್ ಕಂಪನಿ, ಟೋರೊಂಟೋ, ೧೯೫೮

೬೩. ಆಲ್‌ಪ್ರೇಡ್, ಡಿಸೋನಾ, 'ದಿ ಪೋಲಿಟಿಕ್ಸ್ ಆಫ್ ಚೇಂಜ್ ಆಂಡ್ ಲೀಡರ್‌ಶೀಪ್ ಡೆವಲಪ್‌ಮೆಂಟ್,' ಮನೋಹರ ಪಬ್ಲಿಕೇಶನ್, ನವದೆಹಲಿ, ೧೯೭೮

೬೪ ಸಿ.ಪಿ.ಬಾಂಬರಿ, "ಇಂಡಿಯನ್ ಜರ್ನಲ್ ಆಫ್ ಬಬ್ಲಿಕ್ ಎಡ್ಮೈನಿಸ್ಟ್ರೇಶನ್", ವ್ಯಾಲ್ಯುಮ್, ೧೮–೧೯೭೨.

೬೫. ಅಶೋಕ ಮುಖ್ಯೋಪಾಧ್ಯಾಯ "ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಎಡ್ಮೈನಿಸ್ಟ್ರೇಶನ್", ವ್ಯಾಲ್ಯುಮ್. ನಂ ೩೪–೧೯೮೮

೬೬. ವಿಜಯ್‌ರಾಜನ್ ದತ್, 'ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಎಡ್ಮೈನಿಸ್ಟ್ರೇಶನ್" ವ್ಯಾಲುಮ್, ೨೮–೧೯೬೮.

೬೭. ಹರಿದ್ವಾರ್ ರಾಯ್, 'ಇಂಡಿಯನ್ ಜರ್ನಲ್ ಆಪ್ ಪಬ್ಲಿಕ್ ಎಡ್ಮೈನಿಸ್ಟ್ರೇಶನ್" ವ್ಯಾಲುಮ್, ೩೭–೧೯೭೮.

೬೮. ಎಚ್.ಡಿ.ಕೋಪ್ಪರದೇಖರ, 'ಇಂಡಿಯನ್ ಜರ್ನಲ್ ಆಫ್ ಲೋಕಲ್ ಸೇಲ್ಫ್ ಗೌರ್ನಮೇಂಟ್', ಬಾಂಬೆ, ೧೯೯೦, ವ್ಯಾಲುಮ್, ನಂ–೬೧.

೬೯. ಡಿ.ರಾಜದಯಾಕ್ಷ, 'ಇಂಡಿಯನ್ ಜರ್ನಲ್ ಆಫ್ ಲೋಕಲ್ ಸೇಲ್ಪ ಗೌರ್ನಮೆಂಟ್', ಬಾಂಬೆ, ೧೯೭೮, ವ್ಯಾಲುಮ್ ನಂ.೪೯.

೭೦. ಆರ್.ಎನ್.ಸೆಕ್ಸೆನಾ, "ಇಂಡಿಯನ್ ಜರ್ನಲ್ ಆಫ್ ಪೋಲಿಟಿಕ್ಸ್", ವ್ಯಾಲ್ಯುಮ್ ನಂ ೯, ೧೯೭೫

೭೧ ಇಲ್ತಿಜಾ, ಎಚ್.ಖಾನ, "ಇಂಡಿಯನ್ ಜರ್ನಲ್ ಆಫ್ ಪೋಲಿಟಿಕ್ಸ್", ವ್ಯಾಲ್ಯುಮ್ ನಂ ೯, ೧೯೭೫

೭೨ ಇಕ್ಬಾಲ್ ನಾರಾಯಣ, "ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಎಡ್ಮೈನಿಸ್ಟ್ರೇಶನ್", ವ್ಯಾಲ್ಯುಮ್ ನಂ ೩೭,–೧೯೬೮

೭೩. ರಾವ್ ಫೈನಾನ್ಸ್ ಆಂಡ್ ಮುನಿಸಿಪಾಲಿಟಿ ಇನ್ ನಾರ್ಥ ಕೆನರಾ ಡಿಸ್ಟ್ರಿಕ್ಟ್.

೭೪. ಪಂಡಿತ್ ವಿಜಯಲಕ್ಷ್ಮೀ ಎ ಲಿವ್ಸ್ ಆಂಡ್ ಅರ್ಬನ್ ಪೋಲಿಟಿಕ್ಸ್ ಕೇಸ್ ಸ್ಟಡಿ ಆಫ್ ಡೆಲ್ಲಿ, ಇಂಟರ್ ಇಂಡಿಯಾ ಡೆಲ್ಲಿ, ೧೯೮೪

೭೫ ಮುನಿಸಿಪಲ್ ಎನುವಲ್ ರಿಪೋರ್ಟ, ಕರ್ನಾಟಕ ಹೆಲ್ತ್ ಆಂಡ್ ಮುನಿಸಿಪಲ್ ಎಡ್ಮಿನಿಸ್ಟ್ರೇಶನ್ ಡವಲಪಮೆಂಟ್, ಗವರ್ನಮೆಂಟ್, ಮೈಸೂರು, ಮುನಿಸಿಪಾಲಿಟಿ ಆಕ್ಟ್ ೧೯೬೪, ಗವರ್ನಮೆಂಟ್ ಪ್ರೆಸ್, ಬೆಂಗಳೂರು, ೧೯೭೭

೭೬. ಮೈಸೂರು ಲಾ ಡಿಪಾರ್ಟಮೆಂಟ್ ಮೈಸೂರು ಮುನಿಸಿಪಾಲಿಟಿ ಆಕ್ಟ್ ೧೯೬೪, ಗವರ್ನಮೆಂಟ್ ಪ್ರೆಸ್ ಬೆಂಗಳೂರು, ೧೯೬೪.

೭೭. ಡಾ.ಗಂಗೂಲಿ, ವೋಟಿಂಗ್ ಬಿಹೇವಿಯರ್ ಇನ್ ಎ ಡವಲಪಿಂಗ್ ಸೊಸೈಟಿ–ಸ್ಟೆರ್ಲಿಂಗ್

೭೮. ಡಿ.ವಾಸುದೇವರಾವ್, ಅರ್ಬನ್ ಡೆವಲಪ್‌ಮೆಂಟ್ ಪ್ರಾಬ್ಲಮ್ಸ್–ಲನ್ಸರ್ಸ್ ಬುಕ್ಸ್, ಡೆಲ್ಲಿ–೯೦.

೭೯. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಎಡ್ಮಿನಿಸ್ಟ್ರೇಶನ್, ನ್ಯೂ ಡೆಲ್ಲಿ, ಅರ್ಬನ್ ಡೆವಲಪ್‌ಮೆಂಟ್ ಅಥಾರಿಟಿ–೧೯೭೮.

# ಅಧ್ಯಾಯ – 3

# ಪುರಸಭೆಯ ಐತಿಹಾಸಿಕ ಹಿನ್ನೆಲೆ ಮತ್ತು ಜಮಖಂಡಿ ಪುರಸಭೆಯ ಆಡಳಿತ ವ್ಯವಸ್ಥೆಯ ಒಂದು ನೋಟ

ಅ ಪುರಸಭೆಯ ಐತಿಹಾಸಿಕ ಹಿನ್ನಲೆ

೧. ಪೀಠಿಕೆ.

೨. ಪುರಸಭೆಯ ಬೆಳವಣಿಗೆ ಮತ್ತು ವಿಕಾಸ.

೩. ಪುರಸಭೆಯ ಭೌಗೋಳಿಕ ಮೇರೆ.

೪. ಜಮಖಂಡಿ ನಗರದ ಅಕ್ಷಾಂಶ ಮತ್ತು ರೇಖಾಂಶ.

೫. ಜಮಖಂಡಿ ನಾಮ ವಿವೇಚನೆ ಮತ್ತು ಐತಿಹಾಸಿಕ ಹಿನ್ನೆಲೆ.

೬. ಸಮಾರೋಪ

ಬ ಜಮಖಂಡಿಯ ಪುರಸಭೆಯ ಆಡಳಿತ ವ್ಯವಸ್ಥೆಯ ಒಂದು ನೋಟ.

೩.೧ ಪೀಠಿಕೆ

೩.೨ ಚುನಾವಣಾ ಪದ್ಧತಿ

೩.೩ ಪುರಸಭೆಗಳು

೩.೪ ಪುರಸಭೆಯ ಸದಸ್ಯರ ಅಧಿಕಾರ ಮತ್ತು ಕಾರ್ಯಗಳು

೩.೫ ಪರಸಭೆಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ . ಅಧಿಕಾರ ಮತ್ತು ಕಾರ್ಯಗಳು

೩.೬ ಪುರಸಭೆಯ ಅಧಿಕಾರ ಮತ್ತು ಕಾರ್ಯಗಳು

೩.೭ ಪುರಸಭೆಯ ಮುಖ್ಯಾಧಿಕಾರಿ ಅಧಿಕಾರ ಮತ್ತು ಕಾರ್ಯಗಳು

೩.೮ ಸಮಾರೋಪ




ಜಮಖಂಡಿ ಪುರಸಭೆ

# ಅ. ಪುರಸಭೆಯ ಐತಿಹಾಸಿಕ ಹಿನ್ನೆಲೆ

## ೧. ಪೀಠಿಕೆ :

ಬ್ರಿಟಿಷ ಸರಕಾರ ತನ್ನ ಅನುಕೂಲಗೋಸ್ಕರ ಏಕರೀತಿಯ ಆಡಳಿತ ನೀತಿ ಕಾನೂನಗಳನ್ನು ಜಾರಿಗೊಳಿಸುವ ಪ್ರಯತ್ನವನ್ನು ಮಾಡಿತು. ಕರ್ನಾಟಕವು ಬ್ರಿಟಿಷ ಆಳ್ವಿಕೆಯಲ್ಲಿ ವಿವಿಧ ಘಟಕಗಳಾಗಿ ವಿಭಜನೆಗೊಂಡಿದ್ದರಿಂದಾಗಿ ಏಕರೂಪಗೊಳಿಸುವ ಅನಿವಾರ್ಯತೆ ಇತ್ತು. ಈ ಪ್ರಯತ್ನಗಳಿಗೆ ನೇರವಾಗಿ ಬ್ರಿಟಿಷರ ಆಳ್ವಿಕೆಯಲ್ಲಿ ಕೃಷಿಯ, ವಾಣಿಜ್ಯಕರಣ ಪ್ರಕ್ರೀಯೆ ನಡೆದಿದ್ದರಿಂದಾಗಿ ಹಾಗೂ ಸಾರಿಗೆ ಮತ್ತು ಸಂಪರ್ಕ ಕ್ಷೇತ್ರದಲ್ಲಿ ಸುಧಾರಣೆಗಳು ಕಂಡು ಬಂದಿದ್ದರಿಂದಾಗಿ ಸಹಜವಾಗಿಯೇ ಹಲವಾರು ಪೇಟೆ ಪಟ್ಟಣಗಳು ಚುರುಕಿನ ವ್ಯಾಪಾರ ಕೇಂದ್ರಗಳಾಗಿ ಬೆಳೆದವು. ವರ್ತಕ ಸಮುದಾಯಗಳು ನಗರ ಪ್ರದೇಶಗಳಲ್ಲಿಯೇ ನೆಲೆ ನಿಲ್ಲಲಾರಂಭಿಸಿದರು ವಿವಿಧ ಜಾತಿ ಮತ್ತು ಧರ್ಮಗಳ ವ್ಯಾಪಾರಸ್ಥರು ಪ್ರತ್ಯೇಕವಾಗಿಯೇ ಸ್ಥಳಗಳನ್ನು ಆಯ್ಕೆಮಾಡಿಕೊಂಡರು. ವ್ಯಾಪಾರ ನಡೆಸುವ ಪ್ರದೇಶ ಒಂದೇ ಆಗಿದ್ದರೂ ಅವರು ವಾಸಿಸುವ ಧಾರ್ಮಿಕ ಚಟುವಟಿಕೆಗಳನ್ನು ನಡೆಸುವ ಪ್ರದೇಶಗಳು ಬೇರೆ ಬೇರೆ ಆಗಿರುತ್ತಿದ್ದವು. ಹೀಗಾಗಿ ನಗರಗಳ ವ್ಯಾಪ್ತಿ ವಿಸ್ತಾರವಾಗತೊಡಗಿತು. ನಗರಗಳು ಹಲವಾರು ಸಂಸ್ಕರಣಗಳನ್ನು ಒಳಗೊಂಡ ಸಂಕೀರ್ಣ ಪ್ರದೇಶಗಳಾಗಿ ಕಂಡು ಬರಲಾರಂಭಿಸಿದವು. ಜನಸಂಖ್ಯೆಯಲ್ಲಾದ ಹೆಚ್ಚಳ ವ್ಯಾಪಾರದಲ್ಲಿ ಪ್ರಗತಿ ಕೈಗಾರಿಕೆಗಳ ಸ್ಥಾಪನೆ ಸರಕಾರಿ ಕಛೇರಿಗಳು ಹಾಗೂ ಇನ್ನಿತರ ಸಂಘ ಸಂಸ್ಥೆಗಳ ಸ್ಥಾಪನೆ ಮುಂತಾದವು ನಗರ ಪ್ರದೇಶಗಳಲ್ಲಿ ವ್ಯವಸ್ಥಿತ ಆಡಳಿತವೊಂದರ ಹುಟ್ಟಿಗೆ ಕಾರಣವಾದವು.

## ೨. ಪುರಸಭೆಯ ಬೆಳವಣಿಗೆ ಮತ್ತು ವಿಕಾಸ :

ಕರ್ನಾಟಕ ಪುರಸಭೆಗಳ ಅಧಿನಿಯಮ ೧೯೬೪ ರ ಕಾಯ್ದೆಯು ೧೮ ಏಪ್ರೀಲ್ ೧೯೬೪ ರಂದು ಜಾರಿಯಾಯಿತು. ಈ ಕಾಯ್ದೆ ಕಲಂ ೩ರ ಪ್ರಕಾರ ನಗರ ಮತ್ತು ಪುರಸಭೆಗಳೆಂದರೆ ೨೦೦೧ರ ಜನಗಣತಿ ಪ್ರಕಾರ ೫೦ ಸಾವಿರ ಮತ್ತು ಅದಕ್ಕಿಂತ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ಸ್ಥಳಿಯ ಪ್ರದೇಶಗಳಿಗೆ "ನಗರ ಸಭೆ" ಎಂದು ಅಧಿನಿಯಮ ಹೇಳುತ್ತದೆ ಹಾಗೂ ೧೦ ಸಾವಿರಕ್ಕಿಂತ ಹೆಚ್ಚು ಮತ್ತು ೫೦ ಸಾವಿರಕ್ಕಿಂತ ಕಡಿಮೆ ಜನಸಂಖ್ಯೆ ಹೊಂದಿರುತ್ತವೆ. ಅಂತಹ ಪ್ರದೇಶವನ್ನು ಪಟ್ಟಣ ಸಭೆ ಎಂದು ಅಧಿನಿಯಮ ಘೋಷಿಸಿದೆ. ಕರ್ನಾಟಕ ಪುರಸಭೆಗಳ ಅಧಿನಿಯಮ ೧೯೬೪ರ ಕಾಯ್ದೆಯ ಕಲಂ ೬(ಎ) ಪ್ರಕಾರ ಯಾವುದೇ ಸ್ಥಳಿಯ ಪ್ರದೇಶವನ್ನು ಪುರಸಭೆಗಳೆಂದು ಘೋಷಿಸಿದೆ. ಹಳ್ಳಿ, ನಗರ ಪಟ್ಟಣ ಇಲ್ಲವೆ ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಅಕ್ಕ ಪಕ್ಕದ ನಗರಗಳನ್ನು ಅದೇ ರೀತಿ ಕಲಂ ೬(ಬಿ) ರ ಪ್ರಕಾರ ಹಳ್ಳಿ ಅಥವಾ ಹೊರವಲಯದ ಎರಡು ಅಥವಾ ಎರಡಕ್ಕಿಂತ ಹೆಚ್ಚಿನ

ಹಳ್ಳಿಗಳು ಹೊರವಲಯಗಳನ್ನು ಒಳಗೊಂಡಿರುವಂತಹ ಯವುದೇ ಸ್ಥಳೀಯ ಪ್ರದೇಶವನ್ನು ಈ ಅಧಿನಿಯಮವು ಕಲಂ ೩ರ ಪ್ರಕಾರ ಜನಸಂಖ್ಯೆ ಆಧಾರದ ಮೇಲೆ ನಗರ ಸಭೆ, ಪುರಸಭೆ ಅಥವಾ ಪಟ್ಟಣ ಪುರಸಭೆಗಳೆಂದು ಅಧಿನಿಯಮವು ಹೇಳುತ್ತದೆ.

ಕರ್ನಾಟಕ ಪುರಸಭೆಗಳ ಅಧಿನಿಯಮ ೧೯೬೪ ರ ಕಾಯ್ದೆಯು ೩,೬ ನೇ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಪುರಸಭೆ ಮತ್ತು ನಗರ ಸಭೆಗಳ ಅಧಿನಿಯಮಗಳಿಗೆ ಅನುಗುಣವಾಗಿ ಒಂದು ಪ್ರದೇಶವನ್ನು ನಗರ ಸಭೆ ಮತ್ತು ಪುರಸಭೆ ಎಂದೂ ರಚಿಸಬೇಕಾದಲ್ಲಿ ಸರಕಾರವು ಸಂದರ್ಭನುಸಾರವಾಗಿ ಪುರಸಭೆ ರಚಿಸಲು ಕೈಗೊಂಡ ತಿರ್ಮಾನದ ದಿನದಿಂದ ಎರಡು ತಿಂಗಳ ಒಳಗಾಗಿ ಆ ವಿಷಯಕ್ಕೆ ಸಂಬಂಧಿಸಿದ ಕಾರಣಗಳನ್ನು ಬರವಣಿಗೆ ರೂಪದಲ್ಲಿ ಕಮಿಷನರ ಅವರಿಗೆ ಒಪ್ಪಿಸಬೇಕು. ಅದೇ ರೀತಿ ಸರಕಾರವು ಆ ವಿಶ್ಲೇಷನೆಯನ್ನು ಸರಕಾರಿ ರಾಜ್ಯದ ಪತ್ರದಲ್ಲಿ ಇಂಗ್ಲೀಷ ಮತ್ತು ಕನ್ನಡದಲ್ಲಿ ಪ್ರಕಟಿಸಿತು. ಮತ್ತು ಆ ಪ್ರಕಟಣೆಯನ್ನು ರಚನೆಯಾದ ಸ್ಥಳಿಯ ಪ್ರದೇಶಗಳಲ್ಲಿ ಎದ್ದು ಕಾಣುವ ಸ್ಥಳಗಳಲ್ಲಿ ಜಾಹಿರುಪಡಿಸಬೇಕು. ಈ ಕಾಯ್ದೆ ಪುರಸಭೆಯ ಸದಸ್ಯರಿದ್ದಲ್ಲಿ ಆಗಿದೆ. ಜಮಖಂಡಿ ಪುರಸಭೆಯ ಹಾಗೆ ಹಲವಾರು ಕಾರ್ಪೊರೇಷನ್ ಕರ್ನಾಟಕ ರಾಜ್ಯದಲ್ಲಿ ಅಸ್ತಿತ್ವದಲ್ಲಿವೆ. ಕಾಯ್ದೆಯಲ್ಲಿ ಹಳ್ಳಿಯಿಂದ ಜನಸಂಖ್ಯೆ ಮಿತಿ ಮೀರಿದಲ್ಲಿ ಅದಕ್ಕೆ ನಗರಗಳೆಂದು ಅಧಿನಿಯಮವು ಹೊರಡಿಸಿದೆ. ದೈನಂದಿನ ಯಾವತ್ತು ವ್ಯವಹಾರ ಪಟ್ಟಣದ ವ್ಯಾಪ್ತಿಯಲ್ಲಿದ್ದಾಗ ಅದನ್ನು ಪುರಸಭೆ ಕಾರ್ಪೊರೇಷನ್ ಆ ಪಟ್ಟಣಕ್ಕೆ ಕಾಯ್ದೆಯಿಂದ ಸ್ಥಾಪನೆಯಾಗುತ್ತದೆ. ಕಾರ್ಪೊರೇಷನ್ ಎಂದರೆ ಕಾನೂನಿನ ಪ್ರಕಾರ ಇದ್ದು ಅಸ್ತಿತ್ವ ದೈನಂದಿನ ವ್ಯವಹಾರ ಪಟ್ಟಣಕ್ಕೆ ಸಂಬಂಧಿಸಿದ್ದರೆ ಕಾರ್ಯಗಳನ್ನು ಮುಖ್ಯ ಪಟ್ಟಣದ ಪುರಸಭೆಯ ಮುಖ್ಯ ಅಧಿಕಾರಿ ನಿರ್ವಹಿಸುತ್ತಾರೆ. ಈ ಪ್ರಕಾರ ರಚನೆಯಾಗಿದೆ. ಕಾರಣ ಜಮಖಂಡಿ ಪುರಸಭೆಯು ಹಲವಾರು ಕಾರ್ಯಕಲಾಪಗಳನ್ನು ನಿರ್ವಹಿಸುತ್ತದೆ.

ಕರ್ನಾಟಕ ಪುರಸಭೆಗಳ ಅಧಿನಿಯಮ ೧೯೬೪ರ ಕಾಯ್ದೆ ಇದನ್ನು ರಾಷ್ಟ್ರಾಧ್ಯಕ್ಷರು ೭ ಏಪ್ರೀಲ್ ೧೯೬೪ ರಂದು ಮಂಜುರುಮಾಡಿದರು. ಭಾರತ ಸಂವಿಧಾನದ ಪ್ರಕಾರ ಯಾವ ರಾಜ್ಯದಲ್ಲಿ ಇದು ಕಾನೂನು ವಿಭಾಗದಲ್ಲಿ ಕಾಯ್ದೆ ಬರೆದು ಅವರು ರಾಷ್ಟ್ರಾಧ್ಯಕ್ಷರ ಮುಂದೆ ಅವರು ಕಬೂಲಿ ಮಾಡಿಕೊಂಡು ಸಹಿ ಮಾಡಿದ ದಿನವೆ ಆ ಕಾಯ್ದೆ ಜಾರಿಗೆ ಬಂತು. ಈ ಕಾಯ್ದೆ ಮೊಟ್ಟಮೊದಲು ಕರ್ನಾಟಕ ಗೆಜೆಟ್‌ನಲ್ಲಿ ೭ನೇ ೧೯೬೪ ರಂದು ಪ್ರಕಟವಾಯಿತು.

ಈ ಕಾಯ್ದೆಯ ಪ್ರಕಾರ ಜಮಖಂಡಿ ಪುರಸಭೆಯು ೧೯೭೩ ರಲ್ಲಿ ಅಸ್ತಿತ್ವಕ್ಕೆ ಬಂದಿತು. ಪುರಸಭೆ ಕಾರ್ಯ ಕಲಾಪಗಳು ಕಾಯ್ದೆಯಲ್ಲಿ ಹೇಳುವಂತೆ ಬೇರೆ ಬೇರೆ ಭಾಗಗಳಲ್ಲಿ ವಿಂಗಡಿಸಲಾಗಿತ್ತು. ಕರ್ನಾಟಕ ರಾಜ್ಯದಲ್ಲಿನ ಜಮಖಂಡಿ ತಾಲೂಕಿನಲ್ಲಿಯ ಎಲ್ಲ ಹಳ್ಳಿ, ಪಟ್ಟಣ, ನಗರ ಇವು ಬರುವುದಕ್ಕಿಂತ ಮುಂಚೆ ಮುಂಬೈ ವಿಭಾಗದಲ್ಲಿ ಇತ್ತು. ೧೯೫೯ರ ಮೈಸೂರ (ವಿಲೇಜ್ ಪಂಚಾಯತ ಮತ್ತು ಲೋಕಲ್ ಬೋರ್ಡ ಕಾಯ್ದೆ ೧೯೫೯) ೭ ಜುಲೈದಿಂದ ಅಧ್ಯಕ್ಷರ ಅನುಮತಿ ಪ್ರಕಾರ ಜಾರಿಗೆಯಲ್ಲಿ ಬಂದಿತು. ಇದರ ಅಡಿಯಲ್ಲಿ ಕೆಲವೊಂದು ಅಧಿಕಾರ ಪಂಚಾಯತಿಗಳಿಗೆ ಇತ್ತು. ೧೯೫೯ರ ಕಾಯ್ದೆಯ ಪ್ರಕಾರ ನಗರ ಪಂಚಾಯತಿ ಸಮೀಪದ ಊರುಗಳನ್ನು ಸೇರಿಸಿ ಪುರಸಭೆಯನ್ನು ಸ್ಥಾಪಿಸಲಾಯಿತು.

## ೩. ಪುರಸಭೆಯ ಭೌಗೋಳಿಕ ಮೇರೆ :

ಸುಮಾರು ಒಂದು ಸಾವಿರ ವರ್ಷಕ್ಕಿಂತಲೂ ಹಿಂದೆ ಜಮಖಂಡಿಯು ಒಂದು ಪ್ರಸಿದ್ಧ ನಗರವಾಗಿತ್ತು. ಅದಕ್ಕೆ ಹಳೆಯ ಜಮಖಂಡಿ ಎಂದು ಕರೆಯುವರು. ಈ ಹಳೆಯ ಜಮಖಂಡಿಯಲ್ಲಿಯೇ ಕೊಣ್ಣೂರಿನ ದೇಸಾಯಿಯವರ ಪ್ರಚಂಡ ವಾಡೆಯಿತ್ತು. ಇವರು ಜಮಖಂಡಿಯನ್ನು ಬಹಳ ದಿವಸಗಳವರೆಗೆ ಆಳಿದ್ದಾರೆ. ಇಂದು ಇವರ ವಾಡೆಯು ಪೂರ್ಣನಶಿಸಿ ಹೋಗಿದೆ, ಅಲ್ಲದೇ ಅಲ್ಲಿ ಅನೇಕ ಮನೆಗಳು ನಿರ್ಮಾಣವಾಗಿ ಅದರ ಮೂಲಸ್ವರೂಪವೇ ಕಣ್ಮರೆಯಾಗಿದೆ. ಇತ್ತೀಚಿಗೆ ಇದೇ ವಾಡೆಯಲ್ಲಿಯ ಸ್ಥಳದಲ್ಲಿ ಕಾಡಸಿದ್ಧೇಶ್ವರ ಮಂಗಲ ಕಾರ್ಯಾಲಯವನ್ನು ನಿರ್ಮಿಸಲು ದೇಸಾಯಿಯವರ ವಂಶಸ್ಥರಾದ ವಿನೀತ ದೇಸಾಯಿಯವರು ಉದಾರ ದೇಣಿಗೆಗಳನ್ನು ಕೊಟ್ಟಿದ್ದಾರೆ. ಈ ವಾಡೆಯಲ್ಲಿರುವ ಬಾವಿಯಿಂದ ಕೊಣ್ಣೂರು ಗ್ರಾಮಕ್ಕೆ ಹೋಗಲು ಸುರಂಗ ಮಾರ್ಗವಿತ್ತೆಂದು ಜನಪ್ರತೀತಿಯಿದೆ.

ಜಮಖಂಡಿಯ ಮೇಲಗಿರಿ ನಿಂಗಪ್ಪನ ಗುಡ್ಡದ ಪತಲದಿಂದ ಆಗ್ನೇಯ ಮತ್ತು ವಾಯವ್ಯ ದಿಕ್ಕುಗಳಿಂದ ಹಾಯ್ದು ಬರುವ ಗುಡ್ಡವು ಒಂದು ಸ್ಥಳದಲ್ಲಿ ಕೂಡಿ ಒಂದು ಕೋನಾಕೃತಿಯಂತೆ, ಇದರ ಪಶ್ಚಿಮ ದಿಕ್ಕಿಗೆ ಹರಡಿದ ಗುಡ್ಡದ ಮತ್ತೊಂದು ಕೋನದಲ್ಲಿ ಮಧುರಖಂಡಿ ಎಂಬ ಹಳ್ಳಿಯಿದೆ.

ಮೇಲಗಿರಿ ನಿಂಗಪ್ಪನ ಗುಡ್ಡದ ಪಶ್ಚಿಮದ ತುದಿಯಲ್ಲಿ 'ವೇದಾದ್ರಿ' ಎಂಬ ಹೆಸರಿನಿಂದ ಪ್ರಸಿದ್ಧವಾದ ಶ್ರೀ ವೆಂಕಟೇಶ್ವರ ದೇವಾಲಯವು ಕಲ್ಲಳ್ಳಿ ಗ್ರಾಮದ ಗುಡ್ಡದ ಮೇಲಿದೆ. ಜಮಖಂಡಿಯ ಪಶ್ಚಿಮ ದಿಕ್ಕಿಗಿರುವ ಉನ್ನತ ಗಿರಿಯ ಮೇಲೆ ಮೇಲಗಿರಿ ನಿಂಗಪ್ಪನೆಂಬ ಪ್ರಾಚೀನ ದೇವಾಲಯವಿದೆ. ಆ ದೇವಾಲಯದಿಂದ ಸ್ವಲ್ಪ ಕೆಳಗೆ ಇಳಿದು ಬಂದರೆ ಅಲ್ಲಿ ಸನಾಳ ಗ್ರಾಮದಿಂದ ಕೃಷ್ಣಾ ನದಿಯ ನೀರನ್ನು ಸಂಗ್ರಹಿಸಿಡಲು ಮಾಡಿದ ದೊಡ್ಡ ನೀರಿನ ಟ್ಯಾಂಕ್ ಇದೆ. ನಗರದ ಪಶ್ಚಿಮ ಭಾಗದಲ್ಲಿ ೨ಕಿಲೋ ಮೀಟರ ಅಂತರದಲ್ಲಿದ್ದ ರಾಮತೀರ್ಥದಲ್ಲಿ ಹೊಯ್ಸಳ ಕಾಲದ ರಾಮೇಶ್ವರನ ದೇವಾಲಯವಿದೆ. ಮೇಲಗಿರಿ ನಿಂಗಪ್ಪನ ಗುಡ್ಡದ ಮೇಲಿಂದ ನಿಂತು ನೋಡಿದರೆ ಜಮಖಂಡಿ ಪಟ್ಟಣವು ಅತೀ ರಮ್ಯವಾಗಿ ಕಾಣುತ್ತದೆ. ಅಲ್ಲದೇ ಕೃಷ್ಣಾನದಿಯ ಇಕ್ಕೆಲಗಳಲಿದ್ದ ಭೂ ಪ್ರದೇಶವು ಹಚ್ಚ ಹಸಿರಿನಿಂದ ಕಂಗೊಳಿಸುತ್ತದೆ. ಇದೇ ಗುಡ್ಡದಿಂದ ದಕ್ಷಿಣ ಮುಖವಾಗಿ ಇಳಿದು ಬಂದರೆ ವಾರಿಸಿದ್ದಪ್ಪನೆಂಬ ಈಶ್ವರನ ದೇವಾಲಯವಿದೆ. ಇದೇ ದಿಶೆಯಲ್ಲಿ ಸ್ವಲ್ಪ ಕೆಳಗೆ ಬಂದರೆ ಜಂಬುಕೇಶ್ವರನೆಂಬ ಪ್ರಾಚೀನ ದೇವಾಲಯವಿದೆ. ಈ ದೇವಾಲಯದ ಉತ್ತರಕ್ಕೆ ಕಲ್ಮೇಶ್ವರ ಮತ್ತು ಮೇಘಪ್ರಭು ಎಂಬ ಪುರಾತನ ದೇವಾಲಯಗಳಿವೆ. ಈ ದೇವಾಲಯಗಳ ಉತ್ತರ ದಿಕ್ಕಿಗೆ ಯೋಗ ನಾರಾಯಣನೆಂಬ ವೈಷ್ಣವ ದೇವಾಲಯವಿದೆ.

ಹಳೆಯ ಜಮಖಂಡಿಯ ಜನವಸತಿಯು ಜಂಬುಕೇಶ್ವರ ಗುಡಿಯ ದಕ್ಷಿಣ ಮತ್ತು ಪೂರ್ವ ಭಾಗದಲ್ಲಿ ಮತ್ತು ಇಂದಿನ ಕಣ್ವಗಲ್ಲಿವರೆಗೆ ವಾಸಿಸುತ್ತಿತ್ತು. ಇದರ ಉತ್ತರ ಸೀಮೆಯು ಇಂದಿನ ಜಮಖಂಡಿಯ ಮಧ್ಯ ಭಾಗದಲ್ಲಿ ವ್ಯಾಸರಾಯರಿಂದ ಸ್ಥಾಪನೆಗೊಂಡ ಮಾರುತಿ ದೇವಾಲಯದವರೆಗೆ ಪಸರಿಸಿತ್ತು. ಈ ದೇವಾಲಯದ ಉತ್ತರ ಭಾಗದಲ್ಲಿ ಹಿರಿಯ ಸಂಸ್ಥಾನಿಕರಾದ ರಾಮಚಂದ್ರರಾವ

ಅಪ್ಪಾ ಸಾಹೇಬರ ಆಳ್ವಿಕೆಯಲ್ಲಿ ಜನರು ವಾಸಿಸುತ್ತಿದ್ದರು. ಇಂದು ಈ ನಗರವು ಬೆಳೆದು ಕಡಪಟ್ಟಿ ಗ್ರಾಮದವರೆಗೆ ಹರಡಿದೆ. ಕಡಪಟ್ಟಿ ಎಂದರೆ ಕಡೆಯ ಭಾಗ ಎಂದರ್ಥವಾಗುತ್ತದೆ. ಅಂದರೆ ಪೂರ್ವ ಕಾಲದಲ್ಲಿ ಮೇಲಗಿರಿ ನಿಂಗಪ್ಪನ ಗುಡ್ಡವು ಕಡಪಟ್ಟಿ ಊರಿನ ವರೆಗೆ ಪಸರಿಸಿತ್ತೆಂದು ತೋರುತ್ತದೆ. ಮುಂದೆ ಆ ಗುಡ್ಡದ ಭಾಗವನ್ನು ಸಮಪಾತಳಿಯಾಗಿ ಮಾಡಿ ಜನವಸತಿಗೆ ಅನುಕೂಲವನ್ನುಂಟು ಮಾಡಿಕೊಡಲಾಯಿತು. ಹಿಂದೆ ಜಮಖಂಡಿಯ ಸುತ್ತಲೂ ಒಂದು ಭವ್ಯವಾದ ಕೋಟೆಯಿತ್ತು. ಅದರ ಪೂರ್ವ ದಿಕ್ಕಿಗೆ ನಂದಿಗೆಪ್ಪನ (ನಂದಿಕೇಶ್ವರನ) ಗುಡಿ ಉತ್ತರಕ್ಕೆ ಹಣಮಂತ ದೇವರ ಗುಡಿ ದಕ್ಷಿಣ ಮತ್ತು ಪಶ್ಚಿಮಕ್ಕೆ ಮೇಲಗಿರಿ ನಿಂಗಪ್ಪನ ಗುಡ್ಡವು ಹರಡಿದೆ. ನಂದಿಕೇಶ್ವರ ದೇವಾಲಯದ ಪೂರ್ವಕ್ಕೆ (ಕುಂಚನೂರು ರಸ್ತೆ) ಸದಾನಂದ ಸತ್ಪುರಿಷನ ದೇವಸ್ಥಾನವಿದೆ.

ಬಾಗಲಕೋಟ ಜಿಲ್ಲೆ






## ೪. ಜಮಖಂಡಿ ನಗರದ ಅಕ್ಷಾಂಶ ಮತ್ತು ರೇಖಾಂಶ :

ಮಾನವನ ಇತಿಹಾಸವು ಆಯಾ ಪ್ರದೇಶದ ಭೌಗೋಳಿಕ ವಾತಾವರಣವನ್ನು ಅವಲಂಭಿಸಿರುತ್ತದೆ. ಈ ವಾತಾವರಣವು ಆ ಪ್ರದೇಶದಲ್ಲಿ ಬೆಳೆದು ಬಂದ ನಾಗರಿಕತೆಯ ವಿವಿಧ ಹಂತಗಳನ್ನು ಅರಿತುಕೊಳ್ಳಲು ಸಹಾಯಕವಾಗುತ್ತದೆ. ಆದ್ದರಿಂದ ವಾಯುಗುಣ, ಭೂಗುಣ, ನದಿಯ ಬಯಲು, ಪರ್ವತಗಳು, ಪ್ರಾಚೀನ ನಾಗರಿಕತೆಯ ಬೆಳವಣಿಗೆಗೆ ಪೂರಕವಾಗುವಂತೆ ಜಮಖಂಡಿಯ ಸ್ವಾಭಾವಿಕ ಲಕ್ಷಣಗಳು ಅಲ್ಲಿಯ ಸಂಸ್ಕೃತಿಯ ಬೆಳವಣಿಗೆಗೆ ಪೋಷಕವಾಗಿವೆ. ಭೌಗೋಳಿಕವಾಗಿ ಜಮಖಂಡಿಯು ಉತ್ತರ ಅಕ್ಷಾಂಶ ೭೫೦ ರಿಂದ ೭೫೦–೩೮ ರವರೆಗೆ ಪೂರ್ವ ರೇಖಾಂಶ ೧೯೦–೨೪ ರಿಂದ ೧೯೦–೫೩ ರವರೆಗೆ ಇದ್ದು ಸಮುದ್ರ ಮಟ್ಟದಿಂದ ೪೫೦ ಮೀ.ದಿಂದ ೮೦೦ ಮೀಟರದ ವರೆಗೆ ಎತ್ತರವಿದೆ. ಜಮಖಂಡಿ ಭಾಗದ ಹವಾಮಾನವು ಒಣ ಹಾಗೂ ಅರೋಗ್ಯಕರವಾಗಿದ್ದು ಮಾರ್ಚ ತಿಂಗಳ ಮಧ್ಯದಿಂದ ಮೇ ತಿಂಗಳ ಕೊನೆಯ ವರೆಗೆ ಸರಾಸರಿ ಉಷ್ಣತಾಮಾನವು ೧೧೦ ಫ್ಯಾರಾನ ಹೀಟ ದಿಂದ ೧೧೨ ಫ್ಯಾರಾನ ಹೀಟದ ವರೆಗೆ ಇರುತ್ತದೆ. ವಾರ್ಷಿಕ ಸರಾಸರಿ ಮಳೆಯ ಪ್ರಮಾಣವು ೧೮ ರಿಂದ ೨೦ ಇಂಚಿನಷ್ಟು ಆಗುವುದು. ಮುಂಗಾರು ಮಳೆಯು ಜೂನ್ ತಿಂಗಳ ಮೊದಲನೇ ವಾರದಲ್ಲಿ ಪ್ರಾರಂಭವಾಗಿ ಜೂನ್, ಜುಲೈ, ಅಗಸ್ಟ ತಿಂಗಳಲ್ಲಿ ಸುಮಾರು. ಒಂದೇ ಪ್ರಮಾಣದ ಮಳೆ ಇದ್ದು ಸಪ್ಟಂಬರ ತಿಂಗಳಲ್ಲಿ ಮಳೆಯ ಪ್ರಮಾಣವು ಹೆಚ್ಚುವುದು ಕಂಡು ಬರುತ್ತದೆ. ಅಕ್ಟೋಬರ್, ನವ್ಹೆಂಬರ ತಿಂಗಳಲ್ಲಿ ಹಿಂಗಾರು ಮಳೆಯು ತೀವ್ರವಾಗಿದ್ದು ವಾರ್ಷಿಕ ಮಳೆಯು ಶೇ. ೨೧ ರಷ್ಟು ಆಗುತ್ತದೆ. ವರ್ಷದಲ್ಲಿ ಡಿಸೆಂಬರ ತಿಂಗಳು ಅತಿ ಚಳಿ ಇರುವ ತಿಂಗಳಾಗಿದೆ. ಮತ್ತು ಅತಿ ಕಡಿಮೆ ಉಷ್ಣತೆಯು ೧೫.೨ ಡಿಗ್ರಿ ಸೆಲ್ಸಿಯಸ್ ಆಗಿರುತ್ತದೆ. ಫೆಬ್ರುವರಿ ತಿಂಗಳ ಉತ್ತರಾರ್ಧದ ನಂತರ ಉಷ್ಣತೆಯು ಏರುತ್ತಾ ಹೋಗುತ್ತದೆ. ಮುಂದೆ ಮುಂಗಾರು ಮಳೆಯು ಪ್ರಾರಂಭವಾದೊಡನೆ ಹವಾಗುಣವು ತಂಪಾಗುತ್ತದೆ.

ಬಂಗಾಳ ಕೊಲ್ಲಿಯಲ್ಲಿ ಅಪರೂಪವಾಗಿ ಆಗುವ ಸಮುದ್ರ ವಾಯುಭಾರ ಕುಸಿತದಿಂದ ಈ ಭಾಗದಲ್ಲಿ ಅಕ್ಟೋಬರ ಮತ್ತು ನವ್ಹೆಂಬರ ತಿಂಗಳುಗಳಲ್ಲಿ ವ್ಯಾಪಿತವಾಗಿ ಭಾರಿ ಮಳೆ ಬೀಳುವುದು ಕಂಡುಬರುತ್ತದೆ. ಈ ಅವಧಿಯಲ್ಲಿ ಬಿರುಗಾಳಿ ಬೀಸುವುದು ಸಾಮಾನ್ಯವಾಗಿರುತ್ತದೆ. ಜಮಖಂಡಿಯ

ಉತ್ತರಕ್ಕೆ ಕೃಷ್ಣಾ ನದಿಯು ಹರಿದು ಬಂದು ಪೂರ್ವವಾಹಿನಿಯಾಗಿದೆ. ದಕ್ಷಿಣಕ್ಕೆ ಘಟಪ್ರಭಾ ನದಿಯಿದೆ. ಪ್ರಾಚೀನ ಶಿಲಾಲೇಖನಗಳಲ್ಲಿ ಕೃಷ್ಣಾನದಿಗೆ ಕೃಷ್ಣವೇಣಿಯೆಂದು ಕವಿಚಕ್ರವರ್ತಿ ರನ್ನನ ಕಾವ್ಯದಲ್ಲಿ ಪೆರ್ದೊರೆಯೆಂದು ಮತ್ತು ರೂಢಿಯಲ್ಲಿ ಹಿರಿಹೊಳೆಯೆಂದು ಕರೆಯುತ್ತಾರೆ. ಕೃಷ್ಣಾದಂಡೆಯ ಈ ತಾಲೂಕಿನಲ್ಲಿ ಪ್ರಾಚೀನ ಸುಕ್ಷೇತ್ರ ಕಂಕಣವಾಡಿಯ ಗುಹೇಶ್ವರ  ದೇವಾಲಯವು, ಸುರಪಾಲಿಯ ಲಕ್ಷ್ಮೀನರಸಿಂಹ ದೇವಾಲಯವು, ಕಡಕೋಳ ಗ್ರಾಮದ ಗುಬ್ಬೇಶ್ವರ ದೇವಾಲಯ, ಮುತ್ತೂರ ಗ್ರಾಮದ ಮಹಾಲಕ್ಷ್ಮೀ ದೇವಾಲಯಗಳು ಪ್ರಸಿದ್ಧಿಯನ್ನು ಪಡೆದಿವೆ. ಹಿಪ್ಪರಗಿ ಗ್ರಾಮದ ಹತ್ತಿರ ಕೃಷ್ಣಾನದಿಯು ಉತ್ತರವಾಹಿನಿಯಾಗಿದ್ದರಿಂದ ಅದು ಪವಿತ್ರ ಸ್ಥಳವೆಂದು ಬಗೆದು ಅನೇಕ ಜನ ಬಾವುಕರು ಪ್ರತಿ ವರುಷ ಮಕರ ಸಂಕ್ರಮಣದ ದಿನ ಅಲ್ಲಿ ಪುಣ್ಯ ಸ್ನಾನ ಮಾಡಿ ಪುನಿತರಾಗುತ್ತಾರೆ( ಉತ್ತರಾಯಣ ಪುಣ್ಯಕಾಲ ಎಂಬ ಭಾವನೆ) ಅಲ್ಲದೆ ಶ್ರಾವಣ ಮಾಸದಲ್ಲಿ ನದಿ ದೇವತೆಗೆ (ಹಿರಿಹೊಳೆದೇವಿಗೆ) ಬಾಗಿನ ಅರ್ಪಿಸುವ ಸಂಪ್ರಧಾಯವಿದೆ.  ಈ ನದಿಯ ಮಧ್ಯದಲ್ಲಿನ ಬಂಡೆಗಲ್ಲಿನ ಮೇಲೆ ಉತ್ತರೇಶ್ವರ (ಉತ್ತರಲಿಂಗ) ಎಂಬ ಪುರಾತನ ದೇವಾಲಯವಿದೆ. ಜಮಖಂಡಿಯಿಂದ ಐದು ಮೈಲು ಅಂತರದ ಮೇಲೆ "ಸನಾಳ"ಎಂಬ ಗ್ರಾಮವಿದ್ದು ಅಲ್ಲಿಂದ ಕೃಷ್ಣಾನದಿಯ ನೀರನ್ನು ಪಾಯಿಪಗಳ ಮೂಲಕ ಕ್ರಿ.ಶ ೧೯೨೮ ರಲ್ಲಿ ಅಂದಿನ ಜಮಖಂಡಿಯ ಸಂಸ್ಥಾನಿಕರಾದ ಶಂಕರರಾವ ಅಪ್ಪಾಸಾಹೇಬರು ಮೇಲಗಿರಿ ನಿಂಗಪ್ಪನ ಗುಡ್ಡದ ನೆರೆಯಲ್ಲಿ ಒಂದು ಟ್ಯಾಂಕನ್ನು ನಿರ್ಮಿಸಿ ನಗರಕ್ಕೆ ನಳದ ಮೂಲಕ ನೀರನ್ನು ಪೂರೈಸುವ ವ್ಯವಸ್ಥೆಯನ್ನು ಮಾಡಿದ್ದಾರೆ. ಅಂದರಂತೆ ಸಂಸ್ಥಾನದ ವಿಲಿನೀಕರಣದ ನಂತರ ಆಸಂಗಿ ಗ್ರಾಮದ ಹತ್ತಿರ ಕೃಷ್ಣಾನದಿಯ ನೀರನ್ನು ಪಾಯಿಪಗಳ ಮೂಲಕ  ಬನಹಟ್ಟಿಯ ನಗರಕ್ಕೆ ಪೂರೈಸಲಾಗಿದೆ. ಸ್ವಾತಂತ್ರ್ಯದ ನಂತರ ಘಟಪ್ರಭಾ ನದಿಯ ನೀರನ್ನು ಕಾಲುವೆ ಮೂಲಕ ಈ ತಾಲೂಕಿನ ಅನೇಕ ಗ್ರಾಮಗಳ ಭೂಮಿಗೆ ನೀರನ್ನುಣ್ಣಿಸಿ ಹೆಚ್ಚಿನ ಬೆಳೆಗಳನ್ನು ಬೆಳೆದು ಕೊಳ್ಳಲು ಅನುಕೂಲಕರವಾಗಿದೆ. ಇಲ್ಲಿಯ ( ಈ ತಾಲ್ಲೂಕಿನ) ಭೂಮಿಯು ಗುಡ್ಡದ ಸಮೀಪದಲ್ಲಿ ಕೆಂಪು ಮಣ್ಣಿನಿಂದ ಕೂಡಿದ್ದರೆ ಉಳಿದ ಭಾಗದಲ್ಲಿ ಕಪ್ಪು ಮಣ್ಣಿನಿಂದ ಕೂಡಿದ ಎರೆಯ ಭೂಮಿಯು ವಿಶೇಷವಾಗಿದ್ದು. ಜೋಳ, ಗೋದಿ, ಹತ್ತಿ, ಗೋವಿನ ಜೋಳ, ಶೇಂಗಾ, ತೋಗರೆ, ಕುಸುಬಿ ಮೊದಲಾದ ಬೆಳೆಗಳು ವಿಫುಲವಾಗಿ ಬೆಳೆಯುತ್ತವೆ. ಪಾಯಿಪಲಾಯಿನ್ ಮಾಡಿ ಭೂಮಿಗೆ ನೀರನ್ನುಣ್ಣಿಸಿ ಕಬ್ಬಿನ ಬೆಳೆಯನ್ನು ವಿಫುಲವಾಗಿ ಬೆಳೆದುಕೊಳ್ಳುತ್ತಾರೆ.

ಹೀಗೆ ಒಕ್ಕಲುತನವು ಈ ತಾಲೂಕಿನ ಜನರ ಪ್ರಮುಖ ಉದ್ಯೋಗವಿದ್ದಂತೆ ಪಶುಫಾಲನೆ, ಹೈನುಗಾರಿಕೆ, ರೇಷ್ಮೆಯಹುಳ ಸಾಕಾಣಿಕೆ ಮೊದಲಾದ ಕೃಷಿ ಉದ್ಯೋಗಗಳೂ ಸಹ ಸಮೃದ್ಧವಾಗಿ ಬೆಳೆದು ಬಂದಿವೆ.

ಈ ತಾಲ್ಲೂಕಿನ ಅವಳಿ ಪಟ್ಟಣಗಳಾದ ಬನಹಟ್ಟಿ ಮತ್ತು ರಬಕವಿಗಳು ಕೈಮುಗ್ಗದ ಹಾಗೂ ಪಾವರಲೂಮ್ ಸೀರೆಗಳನ್ನು ಉತ್ಪಾಧಿಸುವಲ್ಲಿ ಪ್ರಸಿದ್ಧಿಯನ್ನು ಪಡೆದಿವೆ. ಇಲ್ಲಿಯ ಸೀರೆಗಳಿಗೆ ದೇಶದಾದ್ಯಂತ ಉತ್ತಮ ಬೇಡಿಕೆಯಿದೆ. ಈ ತಾಲೂಕಿನ ಆಸಂಗಿ ಗ್ರಾಮದಲ್ಲಿ ಡೆಂಪೋ ಹಾಲಿನ ಡೇರಿ ಸಿದ್ಧಾಪೂರದಲ್ಲಿಯ ಪ್ರಭುಲಿಂಗೇಶ್ವರ ಶುಗರ್ಸ ಎಂಬ ಸಕ್ಕರೆಯ  ಕಾರ್ಖಾನೆಗಳು ಸ್ಥಾಪನೆಯಾದದ್ದು

ಆರ್ಥಿಕ ರಂಗದಲ್ಲಾದ ಇತ್ತೀಚಿನ ಬೆಳವಣಿಗೆಯ ಪ್ರತೀಕ ದೇಶದಲ್ಲಿಯೂ ಮೊಟ್ಟಮೊದಲು ರೈತರ ಪರಿಶ್ರಮದಿಂದ ನಿರ್ಮಾಣವಾದ ಚಿಕ್ಕಪಡಸಲಗಿಯ ಬ್ಯಾರೇಜು, ಕೃಷಿ ಅಭಿವೃದ್ಧಿಗೆ ಸಹಾಯವಾದದ್ದು ಸ್ಮರಣೀಯ ಹೀಗೆ ಕೃಷಿ ವ್ಯಾಪಾರ, ವಾಣಿಜ್ಯ, ಉದ್ದಿಮೆ ಮೊದಲಾದವುಗಳಿಂದ ಇಲ್ಲಿಯ ಜನಜೀವನವು ಬಹುಮಟ್ಟಿಗೆ ಸೌಖ್ಯಮಯವಾಗಿದೆ.

೫)  ಜಮಖಂಡಿಯ ನಾಮ ವಿವೇಚನೆ ಮತ್ತು ಐತಿಹಾಸಿಕ ಹಿನ್ನಲೆ :

ಜಮಖಂಡಿಯ ಪೂರ್ವ ಕಾಲದ ಇತಿಹಾಸವು ಸುಮಾರು ೧೦ ನೇ ಶತಮಾನದ ಹಿಂದಿನದೆಂದು ಹೇಳಬಹುದು. ಇದರ ಪ್ರಥಮ ಉಲ್ಲೇಖವು ಕವಿಚಕ್ರವರ್ತಿ ರನ್ನನ ಅಜಿತನಾಥ ತೀರ್ಥಂಕರ ಪುರಾಣದ ೧೨ ನೇ ಆಶ್ವಾಸದಲ್ಲಿದೆ. ರನ್ನ ಕವಿಯು ಜಮಖಂಡಿಯ ಬಗೆಗೆ

"ಬೆಳುಗಳಿ ಐನೂರರೊಳ್
ಅಗ್ಗಳವೆನಿಸುವ ಜಂಬುಖಂಡಿ
ಎಪ್ಪತ್ತರ್ಕಳ್ ತಿಲಕಮನೆ
ನೆಗಳ್ದ ಮುಂದುಪೊಳಲೋಳ್ ಪುಟ್ಟಿ,
ಸುಪುತ್ರನೆನಸಿದಂ ಕವಿರನ್ನಂ"[೧]

ಹೀಗೆ ಹೇಳಿದ್ದಾನೆ ಜಮಖಂಡಿ ಎಪ್ಪತ್ತರ ನಾಡಾದ "ಮುದುಪೊಳಲ್" ತನ್ನ ಜನ್ಮಸ್ಥಾನವೆಂದು ರನ್ನ ಹೇಳಿಕೊಂಡಿದ್ದಾನೆ. ರನ್ನನ ಜನ್ಮ ಕ್ರಿ.ಶ ೯೭೪ ರಿಂದ ೯೩ ಆಸು ಪಾಸಿನಲ್ಲಿದೆಯೆಂದು ಪಂಡಿತರ ಅಭಿಮತ ಅವನ ಕಾಲಕ್ಕೆ ಜಮಖಂಡಿ ಒಂದು ಅಗ್ರಹಾರವೆನಿಸಿಕೊಂಡು ಅದರ ಆಧೀನದಲ್ಲಿ ಎಪ್ಪತ್ತು ಹಳ್ಳಿಗಳಿರಬೇಕೆಂದರೆ ಅದು ಸುಮಾರು ಏಳು ಅಥವಾ ಏಂಟನೇಯ ಶತಮಾನದಲ್ಲಿಯೇ ಪ್ರವರ್ಧಮಾನಕ್ಕೆ ಬಂದ ಒಂದು ಪಟ್ಟಣವಾಗಿರಬೇಕು. ಈ ಹಿನ್ನಲೆಯಲ್ಲಿ ನಗರದ ಪ್ರಾಚೀನತೆ ಒಂದು ಸಹಸ್ರ ವರ್ಷಕ್ಕೂ ಮಿಕ್ಕಿದ್ದಾಗಿದೆ.

ಅದರಂತೆ ಗೋಕಾಕ ತಾಮ್ರ ಶಾಸನದಲ್ಲಿ ಜಮಖಂಡಿಯು ಎಪ್ಪತ್ತರ ಹಳ್ಳಿಯೆಂದು ಅದರ ಸಮೀಪದಲ್ಲಿದ್ದ ಮಧುರಖಂಡಿ ಮತ್ತು ಹುನ್ನೂರನ್ನು ಹೂವಿನ ಗ್ರಾಮವೆಂದು ಕರೆಯಲಾಗಿದೆ. ಹಳೆಯ ಶಾಸನಗಳಲ್ಲಿ ಜಮಖಂಡಿಯನ್ನು ಜಂಬುಖಂಡಿ ಎಂದು ಕರೆಯಲಾಗಿದೆ. ಜಮಖಂಡಿ ತಾಲೂಕಿನ ಕೊಣ್ಣೂರಿನ ಕ್ರಿ.ಶ ೧೧೮೫ ರ ಶಾಸನ ಕಲ್ಯಾಣ ಚಾಲುಕ್ಯರ ೬ ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಶಾಸನ ಶಿರೋಳ ಗ್ರಾಮದ ಬಿಜ್ಜಳನ ಕಾಲದ ಶಾಸನ ಜಮಖಂಡಿಯ ಓಲೇಪ್ಪನ ಮಠದ ಕ್ರಿ.ಶ ೧೧೮೨ ಶಾಸನಗಳಲ್ಲಿ ಈ ಊರನ್ನು ಜಂಬುಖಂಡಿ ಎಂದೇ ಕರೆದಿದ್ದಾರೆ.

---

೧.ಪ್ರೊ ಎಸ್.ಎಸ್.ಮುಟೋಳಿ " ಜಮಖಂಡಿ ಇತಿಹಾಸ ದರ್ಪಣ" ಪುಟ ಸಂಖ್ಯೆ ೧೬.

ಜಮಖಂಡಿ ಈ ಹೆಸರಿನ ಉತ್ಪತ್ತಿಯ ಬಗೆಗೆ ಅನೇಕ ರೀತಿಯ ಊಹೆಗಳಿವೆ.

೧. ಜಂಬು ವೃಕ್ಷಗಳ (ನೀರಲ ಗಿಡಗಳ) ವನವು ಈ ಊರಿನ ಸುತ್ತಲೂ ವಿಫಲವಾಗಿ ಬೆಳೆಯುತ್ತಿರುವದರಿಂದ ಇದಕ್ಕೆ ಈ ಹೆಸರು ಪ್ರಾಪ್ತವಾಗಿರಬಹುದೆಂದು ಊಹಿಸಲಾಗಿದೆ. (ಜಂಬು ಎಂದರೆ ನರಲ ಈ ನೇರಲ ವೃಕ್ಷಗಳಿಂದ ಆವೃತ್ತವಾದ ಖಂಡಿ–ಜಮಖಂಡಿ)

೨. ಈ ಭಾಗದಲ್ಲಿ ಜಂಬುಕಗಳು (ನರಿಗಳು) ವಾಸಿಸುವ ಖಿಂಡಿಗಳು ಅಥವಾ ಪೊದರುಗಳು ಬಹಳ ಇರುವದರಿಂದ ಈ ಹೆಸರು ಬಂದಿರಬಹುದೆಂದು ಇನ್ನೊಂದು ಊಹೆ. ಈ ಊಹೆಗೆ ಆಧಾರವಾಗಿ ಯೋಗನಾರಾಯಣನ ಅರ್ಚಕರಾದ ಶ್ರೀ ಕಟ್ಟಿಯವರ ಮನೆತನದಲ್ಲಿದ್ದ ಸುಧಾ ಎಂಬ ಹಸ್ತಲಿಖಿತ ಗ್ರಂಥದ ನಾಲ್ಕನೇಯ ಅಧ್ಯಾಯದ ಕೊನೆಗೆ "ಗೋಮಾಯುಶ್ಚಿದ್ರ" ಗ್ರಾಮಶ್ಯ ಶ್ರೀನಿವಾಸಾಚಾರ್ಯ ಸುತ ಲಿಖಿತ ಗೋಮಾಯುಶ್ಚಿದ್ರ ಗ್ರಾಮಶ್ಯ ಎಂದರೆ ನರಿಯಛಿದ್ರದ ಊರು ಶ್ರೀನಿವಾಸಚಾರ್ಯನೆಂಬುವರ ಪುತ್ರನಿಂದ ಬರೆಯಲ್ಪಟ್ಟಿದು ಈ ಆಧಾರವೊಂದು ಲಭ್ಯವಾಗಿದೆ.

೩. ಇಲ್ಲಿ "ಜಂಬುಕೇಶ್ವರ" ನೆಂಬ ಪ್ರಾಚೀನ ದೇವಾಲಯವಿದೆ. ಈ ಜಂಬುಕೇಶ್ವರನಿಂದ ಈ ಗ್ರಾಮಕ್ಕೆ ಜಂಬುಖಂಡಿ ಎಂಬ ಹೆಸರು ಬಂದಿರಬಹುದೆಂದು ಊಹಿಸಬಹುದು. ಜಂಬುಕಗಳ ನೆಲೆ ಜಂಬುಖಂಡಿ ಜಂಬುಕಗಳ ಅವಾಸಸ್ಥಾನದಲ್ಲಿರುವ ಈಶ್ವರ ಜಂಬುಕೇಶ್ವರ.

೪. ಜಂಬು ಎಂಬ ಮುನಿಯ ಇಲ್ಲಿ ವಾಸಿಸುತ್ತಿದ್ದ. ಅವನಿಂದ ಈ ಊರಿಗೆ ಜಮಖಂಡಿ ಎಂದು ಹೆಸರು ಬಂದಿದೆ ಎಂದು ಮತ್ತೊಂದು ಊಹೆ.

* * *

## ೩. ಜಮಖಂಡಿ ಪೂರಸಭೆಯ ಆಡಳಿತ ವ್ಯವಸ್ಥೆಯ ಒಂದು ನೋಟ

### ೩.೧ ಪೀಠಿಕೆ :

ದೇಶದ ಆರ್ಥಿಕ ಪ್ರಗತಿಯಲ್ಲಿ ಪಟ್ಟಣ ಹಾಗೂ ನಗರದ ಪಾತ್ರ ತುಂಬಾ ಪ್ರಮುಖವಾಗಿದ್ದು. ಗ್ರಾಮೀಣ ಚಿತ್ರಣ ತುಂಬಾ ಬದಲಾಗಿದೆ. ಹಾಲಿ ಜನಸಂಖ್ಯೆಯ ಶೇ ೨೫% ರಷ್ಟು ಜನರು ನಗರವಾಸಿಗಳು ಈ ಶತಮಾನದ ಅಂತ್ಯದಲ್ಲಿ ಪ್ರತಿ ಮೂವರು ಭಾರತೀಯರಿಗೆ ಒಬ್ಬರಂತೆ ನಗರ ವಾಸಿಗಳಾಗಿರುವರು. ಮುಂದಿನ ಎರಡು ಮೂರು ದಶಕಗಳಲ್ಲಿ ನಗರ ಹಾಗೂ ಗ್ರಾಮ ನಿವಾಸಿಗಳ ಸಂಖ್ಯೆ ಸಮಾನವಾಗಿರುವುದು ಎಂದು ಅಂದಾಜು ಮಾಡಲಾಗಿದೆ.

ಇಂದಿನ ನಗರಗಳಿಗೆ ಚಾರಿತ್ರಿಕ ಹಿನ್ನಲೆಯಿಂದ ಪ್ರಾಚೀನ ಕಾಲದಲ್ಲಿ ನಗರಗಳು ವ್ಯಾಪಾರ, ವಾಣಿಜ್ಯ, ಧಾರ್ಮಿಕ ಕೇಂದ್ರಗಳಾಗಿದ್ದು. ಆಗಾಗ ನಡೆದ ಯುದ್ಧಗಳಿಂದ ನಗರಗಳು ನಾಶ ಹೊಂದ್ದಿದವು. ಕಾಲಕ್ರಮೇಣವಾಗಿ ಚೇತರಿಸಿಕೊಂಡವು. ಸ್ವಾತಂತ್ರ್ಯ ಪೂರ್ವದಲ್ಲಿ ಒಟ್ಟು ಜನಸಂಖ್ಯೆ ಶೇ. ೧೦% ರಷ್ಟು ಜನರು ನಗರಗಳಲ್ಲಿ ವಾಸಿಸುತ್ತಿದ್ದರು. ನಗರಕ್ಕೆ ತನ್ನದೇ ಆದ ಒಂದು ಆಡಳಿತ ವ್ಯವಸ್ಥೆಇದೆ. ದೇಶದಲ್ಲಿ ಪ್ರಥಮವಾಗಿ ಪೌರರನಿಗಮ ಕಾಯ್ದೆ ೧೬೮೮ ರಲ್ಲಿ ಅಸ್ತಿತ್ವಕ್ಕೆ ಬಂದಿತು. ೧೭೨೬ ರಲ್ಲಿ ಮುಂಬಯಿ ಹಾಗೂ ಕಲ್ಕತ್ತಾಗಳಲ್ಲಿ ಪೌರನಿಗಮ ಸ್ಥಾಪನೆಗೊಂಡವು.

ಭಾರತ ಸಂವಿಧಾನದಲ್ಲಿ ಸ್ಥಳೀಯ ಆಡಳಿತ ಸಂಸ್ಥೆಗಳ ಕುರಿತಂತೆ ಕೇಂದ್ರ ಸರಕಾರ ೧೯೮೯ ರಲ್ಲಿ ವ್ಯವಸ್ಥಿತವಾದ ಚಿಂತನೆ ಮಾಡಿತು. ನಗರ ಪ್ರದೇಶದಲ್ಲಿ ಪ್ರಜಾತಂತ್ರ ಬಲಪಡಿಸಲು ಜನತೆ ಕೈಗೆ ಅಧಿಕಾರ ನೀಡುವ ಬಗ್ಗೆ ಸಮಾಲೋಚನೆಗಳ ವಿಚಾರ ಸಂಕೀರ್ಣಗಳು ನಡೆದವು. ಈ ಕುರಿತಾಗಿ ಮಸೂದೆಯನ್ನು ಸಂಸತ್ತಿನಲ್ಲಿ ೧೯೮೯ ಅಗಷ್ಟ ತಿಂಗಳಿನಲ್ಲಿ ಮಂಡಿಸಲಾಯಿತು. ಆದರೆ ರಾಜ್ಯ ಸಭೆ (ಮೇಲ್ಮನೆ) ಮಸೂದೆಗೆ ಅಂಗಿಕಾರ ನೀಡಲಿಲ್ಲ.

ಪೌರ ಸಂಸ್ಥೆಗಳ ಕುರಿತಂತೆ ಸಮಗ್ರ ಮಸೂದೆಯನ್ನು ಸಂಸತ್ತಿನಲ್ಲಿ ಡಿಸೆಂಬರ ೧೯೯೨ ರಲ್ಲಿ ಮಂಡಿಸಿ ಒಪ್ಪಿಗೆ ಪಡೆಯಲಾಯಿತು. ಭಾರತದ ರಾಷ್ಟ್ರಪತಿ ೨೦ ನೇ ಎಪ್ರೀಲ್ ೧೯೯೩ ರಂದು ಮಸೂದೆಗೆ ಅಂಗೀಕಾರ ನೀಡಿದರು. ಈ ೭೪ ನೇ ತಿದ್ದುಪಡಿಯು ಭಾರತದಲ್ಲಿ ಸಂವಿಧಾನಾತ್ಮಕ ೯ನೇ ಹೊಸ ಭಾಗ ಸೇರಿಸಿದೆ. ಈ ಭಾಗದಲ್ಲಿ ಪುರಸಭೆಗೆ ಸಂಬಂಧಿಸಿದ ವಿಷಯಗಳ ಕುರಿತು ವಿವರಣೆ ಇದೆ.

### ೩.೨ ಚುನಾವಣಾ ಪದ್ಧತಿ :

ಪ್ರೌಢ ಮತದಾನ ಪದ್ಧತಿ ಪ್ರಜಾಸತ್ತಾತ್ಮಕ ಸರ್ಕಾರದ ಜೀವನಾಡಿಯಾಗಿದೆ. ಭಾರತಲ್ಲಿ ೧೮ ವರ್ಷ ತುಂಬಿದ ಸ್ತ್ರೀ–ಪುರುಷ ಮತದಾನ ಹಕ್ಕನ್ನು ಪಡೆದಿರುವುದರಿಂದ ಇದು ೧೯೮೯ ರಲ್ಲಿ ಸರಕಾರ ೬೧ ನೇ ತಿದ್ದುಪಡಿ ಮಾಡುವ ಮೂಲಕ ಸಂವಿಧಾನದಲ್ಲಿ ಸೇರಿಸಲಾಯಿತು. ಈ ಪದ್ಧತಿ ರಾಷ್ಟ್ರದ ಎಲ್ಲ ಚುನಾವಣಾ ಪದ್ಧತಿಗಳಲ್ಲಿ ಅನ್ವಯಿಸುತ್ತದೆ. ಬುದ್ಧಿಮಾಂದ್ಯರು, ಹುಚ್ಚರು, ಅಪರಾಧಿಗಳು, ದೇಶ ದ್ರೋಹಿಗಳಿಗೆ ಮತದಾನ ಮಾಡಲು ಅವಕಾಶ ಇರುವುದಿಲ್ಲ. ಎಲ್ಲ ವಿಷಯಗಳೂ ಸಂವಿಧಾನದ

ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಇದಕ್ಕೆ ತಮ್ಮದೇ ಆದಂತಹ ಸ್ವತಂತ್ರ ಚುನಾವಣಾ ಆಯೋಗ ನೇಮಕವಾಗಿರುವುದುಂಟು.

೩.೨.೧ ಚುನಾವಣಾ ಪ್ರಕ್ರೀಯೆ

ಸುಸಜ್ಜಿತ ಹಾಗೂ ಸುಸಂಘಟಿತ ಚುನಾವಣಾ ವ್ಯವಸ್ಥೆ ಯಾವುದೇ ಪ್ರಜಾಪ್ರಭುತ್ವದ ವರದಾನವಾಗಿದೆ. ಪ್ರತಿರಾಷ್ಟ್ರವು ತನ್ನದೇ ಆದ ಚುನಾವಣಾ ವ್ಯವಸ್ಥೆಯನ್ನು ಹೊಂದಿದೆ. ಆದರೆ ಎಲ್ಲ ವ್ಯವಸ್ಥೆಗಳು ಒಂದು ಅಂಗೀಕೃತವಾದ ವಿಧಾನ ಹಾಗೂ ತತ್ವಗಳನ್ನು ಹೊಂದಿರುತ್ತವೆ ಈ ಸಾಮಾನ್ಯ ತತ್ವಗಳನ್ನು ಚುನಾವಣಾ ಪ್ರಕ್ರೀಯೆಯಲ್ಲಿ ಯಾರನ್ನು ಆಯ್ಕೆ ಮಾಡಬೇಕು ಚುನಾವಣಾ ಕ್ಷೇತ್ರ ವಿಂಗಡಣೆ ಮತದಾನ ಪಟ್ಟಿ ತಯಾರಿಕೆ ಇತ್ಯಾದಿ ಅಂಶಗಳನ್ನು ಒಳಗೊಂಡಿರುತ್ತದೆ.

೩.೨.೨ ಚುನಾವಣಾ ಅಧಿಸೂಚನೆ

ಚುನಾವಣಾ ಆಯೋಗವು ರಾಷ್ಟ್ರಪತಿಗಳ ಶಿಫಾರಸಿನ ಮೇರೆಗೆ ಚುನಾವಣೆಯನ್ನು ಘೋಷಿಸುತ್ತದೆ. ರಾಷ್ಟ್ರಪತಿ ಆದೇಶ ಬಂದ ನಂತರ ಚುನಾವಣಾ ಆಯೋಗವು ಕೇಂದ್ರ ಮತ್ತು ರಾಜ್ಯ ಸರಕಾರಗಳೊಡನೆ ಸಮಾಲೋಚಿಸಿ ಎಲ್ಲ ಪುರಸಭೆಗಳಿಗೆ ವೇಳಾ ಪಟ್ಟಿಯನ್ನು ಪ್ರಕಟಿಸುತ್ತದೆ. ಚುನಾವಣಾ ವೇಳಾ ಪಟ್ಟಿಯಲ್ಲಿ ನಾಮ ಪತ್ರ ಸಲ್ಲಿಸುವ ದಿನಾಂಕ ಮತ್ತು ನಾಮ ಪತ್ರಗಳ ಪರಿಶೀಲನೆ ಹಾಗೂ ಹಿಂದೆತೆಗೆದುಕೊಳ್ಳುವ ದಿನಾಂಕದ ವಿವರಗಳು ಇರುತ್ತವೆ.

೩.೨.೩ ಚುನಾವಣಾ ಅಧಿಕಾರಿಗಳ ನೇಮಕ

ಚುನಾವಣೆ ವೇಳಾ ಪಟ್ಟಿಯನ್ನು ಪ್ರಕಟಿಸಲಾಗುವುದು. ಚುನಾವಣಾ ಆಯೋಗವು ವಿವಿಧ ಕ್ಷೇತ್ರಗಳಿಗೆ (ವಾರ್ಡುಗಳಿಗೆ) ಚುನಾವಣಾ ಅಧಿಕಾರಿಗಳನ್ನು ನೇಮಿಸುತ್ತಾರೆ. ಚುನಾವಣಾ ಪ್ರಕ್ರೀಯೆಯಲ್ಲಿ ರಾಜ್ಯ ಚುನಾವಣಾ ಅಧಿಕಾರಿಗಳ ಪಾತ್ರವು ಪ್ರಮುಖವಾದದ್ದು.

೩.೨.೪ ಅಭ್ಯರ್ಥಿಗಳ ಅರ್ಹತೆ

ಪೌರಸಭೆಯ ಯಾವುದೇ ವಿಭಾಗದ ಮತದಾರರ ಪಟ್ಟಿಯಲ್ಲಿ ಹೆಸರಿರುವ ಪ್ರತಿಯೊಬ್ಬ ವ್ಯಕ್ತಿಯು ಈ ಅಧಿನಿಯಮದ ಅಥವಾ ತಾತ್ಕಾಲದಲ್ಲಿ ಜಾರಿಯಲ್ಲಿ ಇರುವ ಇತರೆ ಯಾವುದೇ ಕಾನೂನಿನ ಮೇರೆಗೆ ಅನರ್ಹಗೊಂಡಿದ್ದ ಹೊರತು ಆ ವಿಭಾಗದ ಅಥವಾ ಪೌರಸಭೆಯ ಇತರ ಯಾವುದೇ ವಿಭಾಗದ ಚುನಾವಣೆಯಲ್ಲಿ ಚುನಾಯಿತನಾಗಲು ಅರ್ಹನಾಗಿರತಕ್ಕದ್ದು ಮತ್ತು ಅಂತ ಪಟ್ಟಿಯಲ್ಲಿ ಹೆಸರಿಲ್ಲದಿರುವ ಪ್ರತಿಯೊಬ್ಬ ವ್ಯಕ್ತಿಯು ಪೌರಸಭೆಯ ಯಾವುದೇ ವಿಭಾಗದ ಚುನಾವಣೆಯಲ್ಲಿ ಚುನಾಯಿತರಾಗಲು ಅರ್ಹನಲ್ಲ.

## ಅಭ್ಯರ್ಥಿಗಳು ಈ ಕೆಳಗಿನ ಅರ್ಹತೆಗಳನ್ನು ಹೊಂದಿರತಕ್ಕದ್ದು

೧. ಪುರಸಭೆಯ ಸದಸ್ಯನು ಭಾರತೀಯ ನಾಗರಿಕನಾಗಿರಬೇಕು.

೨. ಕನಿಷ್ಠ ೨೫ ವರ್ಷಮೇಲ್ಪಟ್ಟವನಾಗಿರಬೇಕು.

೩. ಆತನು ಸರಕಾರಿ ನೌಕರನಾಗಿರಬಾರದು ಅವನು ಅಂದರೆ ತನ್ನ ಸ್ವಂತಲಾಭಕ್ಕಾಗಿ ಕಛೇರಿಗೆ ಸೇರಿದವನಾಗಿರಬಾರದು.

೪. ಯಾವುದೇ ಸರಕಾರಿ ಸಂಘ, ಸಂಸ್ಥೆ, ವಿಧಾನಸಭೆಯ ಸದಸ್ಯನಾಗಿರಬಾರದು.

೫. ಯಾವನು ಪುರಸಭೆಗೆ ಸ್ಪರ್ಧಿಸುತ್ತಾನೋ ಆತನು ಅದೇ ಪುರಸಭೆಯ ವ್ಯಾಪ್ತಿಗೆ ಒಳಪಟ್ಟಿರಬೇಕು.

೬ ಅಭ್ಯರ್ಥಿಯು ಪುರಸಭೆಯ ಚುನಾವಣೆಗೆ ಸ್ಪರ್ದಿಸಬೇಕಾದರೆ ಪುರಸಭೆಯ ವ್ಯಾಪ್ತಿಯಲ್ಲಿ ಬರುವ ಮತದಾರರ ಪಟ್ಟಿಯಲ್ಲಿ ಆತನ ಹೆಸರು ದಾಖಲಾಗಿರಬೇಕು.

೭ ಆತನು ದಿವಾಳಿಕೋರನು ಭ್ರಷ್ಟಾಚಾರಿ ಮತ್ತು ಮಾನಸಿಕ ಅಸ್ವಸ್ಥನಾಗಿರಬಾರದು.

೮. ಆತನ ಮೇಲೆ ಯಾವುದೇ ನ್ಯಾಯಾಲಯದ ಕ್ರೀಮಿನಲ್ ಕೇಸ ದಾಖಲಾಗಿರಬಾರದು.

೯. ವ್ಯಕ್ತಿಯು ಯಾವುದೇ ನಿವೃತ್ತಿ ವೇತನ ಪಡೆಯುತ್ತಿರಬಾರದು.

೧೦. ಚುನಾವಣೆಯ ಸಿಂಧುತ್ವವನ್ನು ಕ್ರಮಬದ್ಧತೆಯನ್ನು ಪರಿಶೀಲಿಸುವ ವ್ಯವಹಾರಗಳಲ್ಲಿ ನಿರ್ಣಯದ ದಿನಾಂಕದಂದ್ದು ೫ ವರ್ಷ ಮುಕ್ತವಾಗಿದ್ದು ಅಥವಾ ಸರಕಾರವು ಆದೇಶದ ಮೂಲಕ ತೆಗೆದುಹಾಕದ ಹೊರತು.

### ೩.೨.೫ ನಾಮಪತ್ರ ಸಲ್ಲಿಕೆ

ಉಮೇದುವಾರ ಎಂಬ ಪದವು ಇಂಗ್ಲೀಷನಲ್ಲಿ "ಕ್ಯಾಂಡಿಡೆಟ್" ಎಂಬ ಪದದಿಂದ ಬಂದಿದ್ದು, ಬಿಳಿ ವಸ್ತ್ರಧಾರಿ ಎಂಬ ಅರ್ಥವನ್ನು ಕೊಡುತ್ತದೆ. ಪುರಸಭೆಯ ಚುನಾವಣೆಯಲ್ಲಿ ಸ್ಪರ್ಧಿಸುವ ಎಲ್ಲ ಅಭ್ಯರ್ಥಿಗಳು ಸಂಭಂದಪಟ್ಟ ವಾರ್ಡುಗಳ ಅಧಿಕಾರಿಗಳ ನಿಗದಿತ ದಿನದೊಳಗೆ ನಾಮಪತ್ರ ಸಲ್ಲಿಸಬೇಕು. ಆ ನಾಮಪತ್ರವನ್ನು ನಿರ್ದಿಷ್ಟ ಮತದಾರರು ಶಿಪಾರಸ್ಸು ಮಾಡಬೇಕು.

### ೩.೨.೬ ನಾಮ ಪತ್ರಗಳ ಪರಿಶೀಲನೆ

ಪುರಸಭೆಯ ಚುನಾವಣೆಯಲ್ಲಿ ಸ್ಪರ್ಧಿಸುವ ಎಲ್ಲ ಅಭ್ಯರ್ಥಿಗಳು ನಿರ್ಧಾರಿತ ದಿನದಂದ್ದು ಚುನಾವಣೆಯ ಅಧಿಕಾರಿಗಳಿಗೆ ನಾಮಪತ್ರವನ್ನು ಅಭ್ಯರ್ಥಿಗಳ ಸಂಭಂದಿಗಳ ಸಮ್ಮುಖದಲ್ಲಿ ಪರಿಶೀಲಿಸುತ್ತಾರೆ. ಅಭ್ಯರ್ಥಿಗಳಿಗೆ ಚುನಾವಣೆಯಲ್ಲಿ ಸ್ಪರ್ದಿಸಲುಬೇಕಾದ ಎಲ್ಲ ಅರ್ಹತೆಗಳಿವೆಯೇ ಇಲ್ಲವೆ ಎಂದೂ ತಿಳಿಯಲು ಪರಿಶೀಲನೆ ಮಾಡಬೇಕು.

### ೩.೨.೭ ನಾಮ ಪತ್ರಗಳ ಹಿಂದೆ ತೆಗೆದುಕೊಳ್ಳುವಿಕೆ

ನಾಮ ಪತ್ರಗಳ ಪರಿಶೀಲನೆ ನಂತರ ಅಭ್ಯರ್ಥಿಗಳು ತಮ್ಮ ನಾಮಪತ್ರಗಳನ್ನು ನಿರ್ದಿಷ್ಟ

ದಿನಾಂಕದೊಳಗೆ ಸ್ವ ಇಚ್ಚೆಯಿಂದ ಹಿಂದೆ ತಗೆದುಕೊಳ್ಳಬಹುದು. ಈ ಉದ್ದೇಶಕ್ಕಾಗಿ ಚುನಾವಣಾ ಅಧಿಕಾರಿಗಳಿಗೆ ಒಂದು ಅರ್ಜಿ ಸಲ್ಲಿಸಬೇಕು. ಅಂತಹ ಅಭ್ಯರ್ಥಿಗಳ ರಕ್ಷಣಾ ಠೇವಣಿಯನ್ನು ಹಿಂತಿರುಗಿಸಲಾಗುವುದು.

೩.೨.೮ ಚುನಾವಣಾ ಪ್ರಚಾರ

ನಾಮಪತ್ರಗಳ ಪರಿಶೀಲನೆ ನಂತರ ರಾಜಕೀಯ ಪಕ್ಷಗಳು ಪ್ರಚಾರದಲ್ಲಿ ತೊಡಗುತ್ತವೆ. ತಮ್ಮ ಚುನಾವಣೆಯ ಪ್ರಣಾಳಿಕೆ ಮೂಲಕ ಜನರ ಬೆಂಬಲವನ್ನು ಪಡೆಯಲು ಪ್ರಯತ್ನಿಸುತ್ತಾರೆ. ಸಾಮಾನ್ಯವಾಗಿ ಗೋಡೆ ಬರಹ, ಬಿತ್ತಿ ಪತ್ರ ಸಾಮಾಜಿಕ ಸಭೆಗಳು ವೈಯಕ್ತಿಕ ಮನವಿ, ಮನೆಮನೆಗೆ ಹೋಗಿ ಮತ ಯಾಚನೆಗೆ ಇತ್ಯಾದಿ ವಿಧಾನಗಳಿಗೆ ಮತದಾರರನ್ನು ಪ್ರಭಾವಿಸುತ್ತಾರೆ.

ಚುನಾವಣಾ ಆಯೋಗದಿಂದ ಅಧಿಕೃತ ನೊಂದಾಯಿಸಲ್ಪಟ್ಟ ರಾಜಕೀಯ ಪಕ್ಷಗಳಿಗೆ ಸ್ಪಷ್ಟಗೊಳಿಸಿ ದೂರದರ್ಶನ ಮತ್ತು ರೇಡಿಯೋನಲ್ಲಿ ಪ್ರಚಾರಕ್ಕಾಗಿ ಸಮಯ ನೀಡಲಾಗಿದೆ ಪೂರ್ವಪ್ರಚಾರ ಕ್ರೀಯೆ ಮತದಾನ ಆರಂಭವಾಗುವ ೪೮ ಗಂಟೆಗಳ ಮುನ್ನ ಕೊನೆಯಾಗಬೇಕು.

೩.೨.೯ ಮತದಾನ

ಮತದಾನಕ್ಕಾಗಿ ಕ್ಷೇತ್ರವಿಡಿ ಅನೇಕ ಮತ ಪೆಟ್ಟಿಗೆಗಳನ್ನು ಸ್ಥಾಪಿಸಲಾಗುತ್ತದೆ. ಪ್ರತಿ ಮತ ಪಟ್ಟಿಯಲ್ಲಿ ಒಬ್ಬ ಚುನಾವಣಾ ಅಧಿಕಾರಿಯ ನಿಯಂತ್ರಣದಲ್ಲಿದ್ದು. ಅವರಡಿ ಪೊಲೀಸ್ ಅಧಿಕಾರಿಗಳಿರುತ್ತಾರೆ. ಮತದಾರರು ನಿರ್ದಿಷ್ಟ ಮತಗಟ್ಟೆಯಲ್ಲಿ ಮಾತ್ರ ಮತದಾನ ಮಾಡಬೇಕು. ಮತಗಟ್ಟೆಯಲ್ಲಿ ಸ್ಪರ್ಧಿಸುವ ಅಭ್ಯರ್ಥಿಯ ಏಜೆಂಟರು ಕುಳಿತಿರಬಹುದು. ಅಧಿಕಾರಿ ವರ್ಗಗಳ ಪರಿಶೀಲನೆ ನಂತರ ಮತದಾನ ಮಾಡಲು ಅನುಮತಿ ನೀಡುತ್ತಾರೆ. ಒಬ್ಬ ವ್ಯಕ್ತಿ ಒಂದು ಮತವನ್ನು ಮಾತ್ರ ಚಲಾಯಿಸಬಹುದು. ಹಾಗೂ ಮತವನ್ನು ವರ್ಗಾಯಿಸುವಂತಿಲ್ಲ. ಮತದಾನದ ಅವಧಿ ಮುಗಿದ ನಂತರ ಮತ ಪೆಟ್ಟಿಗೆಯನ್ನು ಶೀಲ್ ಮಾಡಿ ಚುನಾವಣೆಯ ಅಧಿಕಾರಿಯ ಕಛೇರಿಗೆ ಕಳಿಸಲಾಗುತ್ತದೆ.

೩.೨.೧೦ ಮತ ಏಣಿಕೆ ಮತ್ತು ಫಲಿತಾಂಶ ಪ್ರಕಟಣೆ

ಮತ ಏಣಿಕೆ ದಿನದಂದೂ ಅಭ್ಯರ್ಥಿಗಳು ಏಜೆಂಟರು ಎದುರಲ್ಲಿ ಮತ ಏಣಿಕೆ ಮಾಡಲಾಗುವುದು. ಮತ ಏಣಿಕೆಯಲ್ಲಿ ಸರಿಯಾಗಿ ಚಲಾಯಿಸದೆ ಇರುವ ಮತಗಳನ್ನು ಕುಲಗೆಟ್ಟ ಮತಗಳೆಂದು ಪರಿಗಣಿಸಲಾಗುವುದು. ನಂತರ ಇತರರಿಗಿಂತ ಹೆಚ್ಚು ಮತಗಳನ್ನು ಪಡೆದ ಅಭ್ಯರ್ಥಿಯನ್ನು ವಿಜಯ ಎಂದೂ ಘೋಷಿಸಲಾಗುವುದು. ಈ ಘೋಷಣೆಯು ಚುನಾವಣಾ ಅಧಿಕಾರಿ ಮಾಡುತ್ತಾರೆ. ನಂತರ ಪೂರ್ಣ ಫಲಿತಾಂಶ ಬಂದ ನಂತರ ಮುಂದಿನ ಕ್ರಮಕ್ಕಾಗಿ ಮುಂದಿನ ಚುನಾವಣಾ ಆಯೋಗಕ್ಕೆ ಕಳುಹಿಸಲಾಗುವುದು.

೩.೨.೧೧ ಕೌನ್ಸಿಲರಗಳ ಕಾಲಾವಧಿ

ಪುರಸಭೆಯ ಚುನಾವಣೆಯಲ್ಲಿ ಚುನಾಯಿತರಾದ ಕೌನ್ಸಿಲರನ ಅವಧಿಯು ೫ ವರ್ಷಗಳಾಗಿರುತ್ತದೆ. ಸರಕಾರದ ಮೂಲಕ ಅದರಲ್ಲಿ ನಿರ್ದಿಷ್ಟ ಪಡಿಸಬೇಕಾದ ಕಾರಣಗಳಿಗಾಗಿ ಅಂತಹ ಕೌನ್ಸಿಲರಗಳಿಗೆ ಅವಧಿ ಉತ್ತರಾನ್ವವಾಗಲಿ ಅಥವಾ ಪೂರ್ವಾನ್ವಯವಾಗಲಿ ವಿಸ್ತರಿಸಬಹುದು. ಅದಾಗ್ಯೂ ಹಾಗೇ ವಿಸ್ತರಿಸಿದ ಒಟ್ಟು ಅವಧಿ ಇಪ್ಪತ್ನಾಲ್ಕು ತರಗಳನ್ನು ಮೀರತಕ್ಕದಲ್ಲ.

೧೯೭೪ (೨) ಕರ್ನಾಟಕ ಲಾ ಜರ್ನಲ್ ಟಿಪ್ಪಣಿ ನಂ ೧೬ ೧೨ ನೇ ಪ್ರಕರಣದ ಮೇರೆಗೆ ನೇಮಕಗೊಂಡು ಕೌನ್ಸಿಲರನು ಪದಾವಧಿಯು ಒಂದು ವರ್ಷದ ಅಥವಾ ಖಾಲಿಸ್ಥಾನದಲ್ಲಿ ಚುನಾಯಿತನಾಗುವರೆಗೆ ಇದರಲ್ಲಿ ಯಾವುದು ಮೊದಲು ಅದು ಆಗಿರತಕ್ಕದ್ದು.

೩.೨.೧೨ ಕೌನ್ಸಿಲರಗಳ ಭತ್ಯೆಗಳು

ಪೌರಸಭೆ ನಿದಿಗಳಿಂದ ಪ್ರತಿಯೊಬ್ಬ ಕೌನ್ಸಿಲರನು ಸರಕಾರವು ಕಾಲಕಾಲಕ್ಕೆ ನಿಗದಿಪಡಿಸಬಹುದಾದಂಥ ಒಂದು ನೂರು ರೂಪಾಯಿಗಳಿಗೆ ಮೀರಿದ ಮಾಹೆಯಾನ ಭತ್ಯೆಯನ್ನು ಸ್ವೀಕರಿಸಬಹುದು.

೩.೨.೧೩ ಖಾಲಿ ಸ್ಥಾನಗಳನ್ನು ಭರ್ತಿಮಾಡುವುದು.

ಕೌನ್ಸಿಲರನಾಗಿ ಆಯ್ಕೆಯಾದ ಅಥವಾ ನೇಮಕಗೊಂಡ ವ್ಯಕ್ತಿ ರಾಜೀನಾಮೆ ಅಥವಾ ಪದವನ್ನು ಅಂಗೀಕರಿಸದೆ ಇರುವ ಮೂಲಕ ಅಥವಾ ವ್ಯಕ್ತಿ ಕೌನ್ಸಿಲರನಾಗಿರಲು ಅರ್ಹನಾಗುವ ಮೂಲಕ ಅಥವಾ ೨೩ನೇ ಪ್ರಕರಣದ ಉಪ ಭದ್ದಗಳನ್ನು ಮೇರೆಗೆ ಯಾವುದೇ ಚುನಾವಣೆಯನ್ನು ರದ್ದುಗೋಳಿಸುವುದರ ಮೂಲಕ ಅಥವಾ ಅವನ ಅವಧಿ ಮುಕ್ತಾಯ ವಾಗುವದಕ್ಕಿಂತ ಮುಂಚೆ ಉಂಟಾದ ಕೌನ್ಸಿಲರನ ಮರಣದ ಅಥವಾ ಅವನನ್ನು ತೆಗೆದು ಹಾಕುವುದು. ಅಥವಾ ಅಸಮರ್ಥತೆ ಮೂಲಕ ಸ್ಥಾನವನ್ನು ಖಾಲಿಯಾದಲ್ಲಿ ಆ ಖಾಲಿಯಾದ ಸ್ಥಾನವನ್ನು ತರುವಾಯ ಆದಷ್ಟು ಬೇಗನೆ ಅದಕ್ಕೆ ಆ ವ್ಯಕ್ತಿಯನ್ನು ಚುನಾಯಿಸುವ ಮೂಲಕ ಭರ್ತಿ ಮಾಡತಕ್ಕದ್ದು.

೧೮ನೇ ಪ್ರಕರಣದ (೧)ನೇ ಉಪ ಪ್ರಕರಣದ ಮೇರೆಗೆ ಕೌನ್ಸಿಲರಗಳು ಪದಾವಧಿ ಮುಕ್ತಾಯವಾಗುವದಕ್ಕೆ ಮುಂಚೆ ೬ ತಿಂಗಳೊಳಗೆ ಆಕಸ್ಮಿಕ ಖಾಲಿಯಾದ ಸ್ಥಾನವನ್ನು ಭರ್ತಿ ಮಾಡುವ ಯಾವುದೇ ಚುನಾವಣೆ ನಡೆಸತಕ್ಕದಲ್ಲ.

ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿ ಮಾಡಲು ಚುನಾಯಿತನಾದ ಕೌನ್ಸಿಲರ ಪದಾವಧಿಯ ಖಾಲಿ ಸ್ಥಾನವು ಉಂಟಾಗದಿದ್ದರೆ ಯಾವ ಕೌನ್ಸಿಲರನು ಸ್ಥಾನದಲ್ಲಿ ಅವನು ಚುನಾಯಿತನಾಗಿರುವನೋ ಆ ಕೌನ್ಸಿಲರನು ಪದಾಧಾರಣ ಮಾಡಲು ಹಕ್ಕುಳ್ಳನಾಗಿರಬಹುದಾದಷ್ಟು, ಅವಧಿ ಮೇರೆಗೆ ಮಾತ್ರ ಮುಂದುವರೆಯುತಕ್ಕದ್ದು.

೩.೩ ಪುರಸಭೆ

ಕರ್ನಾಟಕ ಪುರಸಭೆಗಳ ೧೯೬೪ ರ ಕಾಯ್ದೆಯ ಅನ್ವಯ ರಾಜ್ಯದಲ್ಲಿ ಪುರಸಭೆಗಳ ರಚನೆಯಾಗಿದೆ. ಈ ಕಾಯ್ದೆಗೆ ೧೯೯೫ ಕೆಲವು ತಿದ್ದುಪಡಿಗಳನ್ನು ಮಾಡಲಾಗಿದೆ. ಪುರಸಭೆಗಳನ್ನು ಆಂಗ್ಲ ಭಾಷೆಯಲ್ಲಿ ಮುನ್ಸಿಪಾಲ್ಟಿ ಎನ್ನುವರು. ಮುನ್ಸಿಪಾಲ್ಟಿಯು ರೋಮನ ಪದ 'ಮುನ್ಸಿಪಮ್' ಎಂಬ ಪದದಿಂದ ಬಂದಿದೆ. ಮುನ್ಸಿಪಮ್ ಎಂದರೆ "ಸ್ವತಂತ್ರ ನಗರ" ಈ ನಗರದ ಆಡಳಿತ ನಿವಾರಣೆಯನ್ನು ರೋಮನ್ನರು ತಮ್ಮದೇ ಆದ ಕೆಲವು ಕಾಯ್ದೆಗಳ ಮೂಲಕ ನಿರ್ವಹಿಸುತ್ತಿದ್ದರು. ಯಾವುದೇ ನಗರ ಅಥವಾ ಪಟ್ಟಣದ ಆಡಳಿತ ಚುನಾವಣೆ ಮಂಡಳಿ ಮೂಲಕ ನಡೆಸುತ್ತಿದ್ದರೆ ಅದಕ್ಕೆ ಮುನ್ಸಿಪಾಲ್ಟಿ ಎನ್ನುವರು.

೩.೩.೧ ಪುರಸಭೆಗಳ ರಚನೆ

ದೇಶದಲ್ಲಿ ಎಲ್ಲ ಪುರಸಭೆಗಳ, ನಗರ ಪಂಚಾಯತಿ ಪೌರ ಪರಿಷತ್ತು ಪೌರ ನಿಗಮಗಳೆಂದು ವಿಂಗಡಿಸಲಾಗಿದೆ. ಪುರಸಭೆಯ ಎಲ್ಲ ಸ್ಥಾನಗಳನ್ನು ನೇರ ಚುನಾವನೆಯ ಮೂಲಕ ತುಂಬಲಾಗುವುದು. ಪುರಸಭೆಯ ವಿಶೇಷ ಆಡಳಿತದಲ್ಲಿ ವಿಶೇಷ ಜ್ಞಾನ ಹೊಂದಿದ್ದು, ಕೆಲವರನ್ನು ನಾಮಕರಣ ಮಾಡುವರು.

ಪುರಸಭೆಯ ಕೌನ್ಸಿಲರಗಳ ರಚನೆ ಸೇರಿ ಚುನಾವಣೆಯ ಮೂಲಕ ಸದಸ್ಯರುಗಳ ಸ್ಥಾನಗಳ ವಿವರಣೆಗಳು ಇರುವಂತೆ ಕರ್ನಾಟಕ ಪೌರಸಭೆಗಳ ಅಧಿನಿಯಮ ೧೯೬೪ ರ ಕಾಯ್ದೆಯ ಪ್ರಕಾರ ಈ ಕೆಳಗಿನಂತೆ ವಿಂಗಡಿಸಲಾಗಿದೆ.

ಕೋಷ್ಟಕ (೩.೧)
ಪುರಸಭೆಗಳ ರಚನೆ

| ಅ.ನಂ | ಜನಸಂಖ್ಯೆ | ಕೌನ್ಸಿಲರ್ಸ ಸಂಸದಸ್ಯರು |
|---|---|---|
| ೧ | ೨೦,೦೦೦ ಜನಸಂಖ್ಯೆಯನ್ನು ಹೊಂದಿದ ಪುರಸಭೆಗೆ | ೧೫ |
| ೨ | ೨೦,೦೦೦ ರನ್ನು ಮೀರಿದ ಆದರೆ ೩೦,೦೦೦ ಸಾವಿರ ಮೀರದ ಜನಸಂಖ್ಯೆಯನ್ನು ಹೊಂದಿದ ಪುರಸಭೆಗೆ | ೧೯ |
| ೩ | ೩೦,೦೦೦ ಸಾವಿರ ಮೀರಿದ ಆದರೆ ೪೦,೦೦೦ ಸಾವಿರ ಮೀರದ ಜನಸಂಖ್ಯೆಯನ್ನು ಹೊಂದಿರುವ ಪುರಸಭೆ | ೨೩ |
| ೪ | ೪೦,೦೦೦ ಸಾವಿರವನ್ನು ಮೀರಿದ ಆದರೆ ೫೦,೦೦೦ ಸಾವಿರವನ್ನು ವಿುರದ ಜನಸಂಖ್ಯೆಯನ್ನು ಹೊಂದಿರುವ ಪುರಸಭೆ | ೨೭ |
| ೫ | ೫೦,೦೦೦ ಸಾವಿರವನ್ನು ಮೀರದ ಆದರೆ ಒಂದು ಲಕ್ಷವನ್ನು ಮೀರದ ಜನಸಂಖ್ಯೆಯನ್ನು ಹೊಂದಿರುವ ಪುರಸಭೆ | ೩೧ |
| ೬ | ಒಂದು ಲಕ್ಷವನ್ನು ಮೀರಿರುವ ಜನಸಂಖ್ಯೆಯನ್ನು ಹೊಂದಿರುವ ಜನಸಂಖ್ಯೆ | ೩೫ |

ವಿವರಣೆ: "ಉಪ ಪ್ರಕರಣದಲ್ಲಿ" ಎಂದರೆ ಯಾವ ನಿಕಟ ಪೂರ್ವದ ಜನಗಣತಿಯಲ್ಲಿ ಸಂಭಂದ ಪಟ್ಟಿರುವ ಅಂಕಿಗಳನ್ನು ಪ್ರಕಟಿಸಲಾಗಿದೆಯೋ ಆ ಯಾವುದೇ ನಿಕಟ ಪೂರ್ವಕವಾದ ಜನಗಣತಿಯಲ್ಲಿ ಖಚಿತ ಪಡಿಸಿಕೊಂಡು ಜನಸಂಖ್ಯೆಯು.

೧. ಈ ವಿವರಣೆಯಲ್ಲಿ ಯಾವ ನಿಕಟ ಪೂರ್ವದ ಜನಗಣತಿಗೆ ಪ್ರಕಟಿಸಲಾಗಿದೆಯೋ ಆ ಯಾವುದೇ ನಿಕಟ ಪೂರ್ವದ ಜನಗಣತಿ ಮಾಡಲಾದ ಉಲ್ಲೇಖವು ೨೦೦೦ ನೇ ಇಸ್ವಿಯ ತರುವಾಯ ತೆಗೆದುಕೊಳ್ಳುವ ಮೊದಲು ಜನಗಣತಿಗಾಗಿ ಸಂಭಂದ ಪಟ್ಟ ಅಂಕಿಗಳನ್ನು ಪ್ರಕಟಿಸಲಾಗುವವರೆಗೆ ೧೯೭೧ ರ ಪ್ರಕಾರ.

೨. ೧೨ನೇ ಪ್ರಕರಣದ ಉಪ ಬಂದಕ್ಕೆ ಒಳ ಪಟ್ಟ ಪ್ರತಿಯೊಂದು ಪುರಸಭೆ ಎಲ್ಲಾ ಕೌನ್ಸಿಲರಗಳನ್ನು ಪ್ರೌಢ ಮತಧಾನದ ಆಧಾರದ ಮೇಲೆ ನಿಯಮಿಸಲಾಗದ ರೀತಿಯಲ್ಲಿ ನೇರ ಚುನಾವಣಾ ಮೂಲಕ ಆಯ್ಕೆ ಮಾಡತಕ್ಕದ್ದು.

೩. ಮುನ್ಸಿಪಲ್ ಕೌನ್ಸಿಲನಲ್ಲಿನ ಅನೂಸೂಚಿತ ಜಾತಿಗಳು ಮತ್ತು ಮಹಿಳೆಯರಿಗಾಗಿ ಸ್ಥಾನಗಳನ್ನು ಮೀಸಲಿಡತಕ್ಕದ್ದು. ಅನೂಸೂಚಿತ ಜಾತಿಗಳಿಗಾಗಿ ಸ್ಥಾನಗಳ ಸಂಖ್ಯೆಯು ಪುರಸಭೆಯಲ್ಲಿ ಅನುಸೂಚಿತ ಜಾತಿಗಳ ಸಂಖ್ಯೆ ಹೊಂದುವಂತ್ತಿದೆ. ಆದ ಪ್ರಮಾಣವನ್ನು ಸಾಧ್ಯವಾದ ಮಟ್ಟಿಗೆ ಮುನ್ಸಿಪಲ್ ಕೌನ್ಸಿಲ್‌ನಲ್ಲಿ ಸ್ಥಾನಗಳ ಒಟ್ಟು ಸಂಖ್ಯೆಗೆ ಹೊಂದಿರತಕ್ಕದ್ದು. ಅಂಥ ಜಾತಿ ಜನಸಂಖ್ಯೆಯ ನೂರು ಅಥವಾ ಹೆಚ್ಚಿಗೆ ಇದ್ದರೆ ಮುನ್ಸಿಪಲ್ ಕೌನ್ಸಿಲನಲ್ಲಿ ಅನುಸೂಚಿತ ಜಾತಿಗಳಿಗಾಗಿ ಕನಿಷ್ಟ ಪಕ್ಷ ಒಂದು ಸ್ಥಾನವನ್ನು ಮೀಸಲಿಡತಕ್ಕದು. ಅನುಸೂಚಿತ ಜಾತಿಗಳಿಗಾಗಿ ಮೀಸಲಾತಿಯ ಸಂವಿಧಾನದ ೩೩೪(ಅ)ನೇಯ ಅನುಚ್ಛೇದದಲ್ಲಿ ನಿರ್ದಿಷ್ಟ ಪಡಿಸಿದ ಅವಧಿಯು ತರುವಾಯ ಊರಲ್ಲಿ ಪರಿಣಾಮಕಾರಿಯಾಗುದು. ನಿಂತು ಹೋಗತಕ್ಕದು.ಈ ಉಪಕರಣದ ಎರಡನೇಯ ಪರಂತುಕವು ಆಗ ಅಧಿಕಾರದಲ್ಲಿರುವವರು ಮುನ್ಸಿಪಲ್ ಕೌನ್ಸಿಲರಗಳ ಪಧಾವದಿಯು ಮುಕ್ತಾಯಗೊಳ್ಳುವರೆಗು ಮುನ್ಸಿಪಲ್ ಕೌನ್ಸಿಲರನಲ್ಲಿ ಯಾವುದೇ ಪ್ರಾತಿನಿದ್ಯಕ್ಕೆ ಭಾದಕವನ್ನುಂಟು ಮಾಡತಕ್ಕದಲ್ಲ.

೪) ಪ್ರತಿಯೊಂದು ಮುನ್ಸಿಪಲ್ ಕೌನ್ಸಿಲ್‌ಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಶೇ ೨೦ರಷ್ಟು ಸ್ಥಾನವನ್ನು ಮಹಿಳೆಯರಿಗಾಗಿ ಮೀಸಲಿಡತಕ್ಕದ್ದು.

೫) ಈ ಪ್ರಕರಣದಲ್ಲಿ ಅಡಕವಾಗಿರುವ ಯಾವುದೇ ಮುನ್ಸಿಪಲ್ ಕೌನ್ಸಿಲ್‌ನಲ್ಲಿ ಯಾರಿಗಾಗಿ ಸ್ಥಾನಗಳನ್ನು ಮೀಸಲಿರಿಸಿದೆಯೋ ಅನೂಸೂಚಿತ ಜಾತಿಗಳ ಸದಸ್ಯರು ಅಥವಾ ಮಹಿಳೆಯರು ಕೌನ್ಸಿಲ್‌ನಲ್ಲಿ ಮೀಸಲಿರಿಸಿದ ಸ್ಥಾನಗಳಿಗೆ ಚುನಾವಣೆಗೆ ನಿಲ್ಲಲ್ಲು ಪ್ರತಿಬಂದಿಸುತ್ತದೆಂದೂ ಭಾವಿಸತಕ್ಕದಲ್ಲ.

೩.೩.೨ ಸ್ಥಾನಗಳ ಮೀಸಲಾತಿ

ಪರಿಶಿಷ್ಟ ಜಾತಿ ಜನಾಗಂದ ಹಿಂದುಳಿದ ವರ್ಗ ಹಾಗೂ ಮಹಿಳೆಯರಿಗೆ ಸಾಕಷ್ಟು ಮೀಸಲಾತಿ ಇದೆ ಪುರಸಭೆಗಳ ಅಧ್ಯಕ್ಷರು ಹುದ್ದೆಗಳಿಗೆ ಮೀಸಲಾತಿ ಅನ್ವಯಿಸುವುದು. ಪರಿಶಿಷ್ಟ ಜಾತಿ ಜನಾಂಗದ ಹಿಂದುಳಿದ ವರ್ಗದ ಹಾಗೂ ಮಹಿಳೆಯರಿಗೆ ನೇರ ಚುನಾವಣೆ ಮೂಲಕ ಪುರಸಭೆಗೆ ತುಂಬುವ ಸದಸ್ಯರ ಸ್ಥಾಗಳಲ್ಲಿ ಮೀಸಲಾತಿ ಕಲ್ಪಿಸಲಾಗಿದೆ.

೧. ಪುರಸಭೆಯ ಪ್ರದೇಶದಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳ ಜನಸಂಖ್ಯೆಯು ಯಾವ ಅನುಪಾತದಲ್ಲಿಯೂ ಹಾಗೇ ಮೀಸಲಿರಿಸಿದ ಸ್ಥಾನಗಳ ಸಂಖ್ಯೆ ಪುರಸಭೆಯಲ್ಲಿ ಅದೇ ಅನುಪಾತಲ್ಲಿರಬೇಕು.

೨. ಪುರಸಭೆಯ ಒಟ್ಟು ಸದಸ್ಯರ ಸಂಖ್ಯೆಯಲ್ಲಿ ೧/೩ ಸ್ಥಾನಗಳು ಹಿಂದುಳಿದ ವರ್ಗದವರಿಗೆ ಮೀಸಲಿಡಲಾಗಿದೆ.

೩. ಮೀಸಲಾಗಿಸಿದ್ದರಿಂದ ಹಾಗೂ ಮೀಸಲಾಗಿರಿಸಿದ ಒಟ್ಟು ಸ್ಥಾನಗಳಲ್ಲಿ ೧/೩ ಸ್ಥಾನಗಳು ಮಹಿಳೆಯರಿಗೆ ಮೀಸಲಾಗಿರಬೇಕು.

೩.೩.೩ ನಾಮಕರಣ

ಪುರಸಭೆಯ ಆಡಳಿತ ಸಾಮಾಜಿಕ ಸೇವೆಯಲ್ಲಿ ಪರಿಣಿತರಾದ ೫ ಜನರನ್ನು ಸದಸ್ಯರನ್ನಾಗಿ ಸರಕಾರ ನಾಮಕರಣ ಮಾಡುವುದು.

೧. ಪುರಸಭೆಯನ್ನು ಪೂರ್ಣವಾಗಿ ಭಾಗಶಃ ಪ್ರತಿನಿಧಿಸುವ ಸಂಸತ ಸದಸ್ಯರು ರಾಜ್ಯವಿಧಾನ ಸಭೆಗೆ ಹಾಗೂ ವಿಧಾನ ಪರಿಷತ್ ಸದಸ್ಯರು ಕಾರ್ಯ ಕಲಾಪಗಳಲ್ಲಿ ಬಾಗಿಯಾಗಬಹುದು. ಆದರೆ ಅವರಿಗೆ ಮತಧಾನದ ಹಕ್ಕು ಇರುವದಿಲ್ಲ.

೨. ಪುರಸಭೆಗಳ ಕಾಲಾವಧಿ ೫ ವರ್ಷಗಳಿದ್ದು ಒಂದು ವೇಳೆ ಪುರಸಭೆ ವಿಸರ್ಜನೆಗೊಂಡರೆ

೬ ತಿಂಗಳವರೆಗೆ ಚುನಾವಣೆ ನಡೆಸಬೇಕು.

೩. ಪುರಸಭೆಯ ಮತದಾರರ ಪಟ್ಟಿಯಲ್ಲಿ ಹೆಸರಿರುವವರು ಮತಧಾನ ಮಾಡಲು ಅರ್ಹರು. ೧೮ ವರ್ಷ ತುಂಬಿರುವವರು ಮತಧಾನ ಮಾಡಲು ಅರ್ಹರು ೨೧ ವಯಸ್ಸು ತುಂಬಿದವರು ಸದಸ್ಯರ ಸ್ಥಾನಕ್ಕೆ ಸ್ಪರ್ಧಿಸಲು ಅರ್ಹರರು ೨೧ ವರ್ಷ ತುಂಬಿದ ಸದಸ್ಯರ ಅಧಿಕಾರ ಅವಧಿ ೫ ವರ್ಷ ಇರುವುದು.

೩.೪ ಪುರಸಭೆಯ ಸದಸ್ಯರ ಅಧಿಕಾರ ಮತ್ತು ಕಾರ್ಯಗಳು

೧. ಪುರಸಭೆಯ ಸದಸ್ಯರು ತಮ್ಮ ವಾರ್ಡಿನ ಬೀದಿ ದೀಪದ ವ್ಯವಸ್ಥೆಯನ್ನು ಮಾಡಲು ಕ್ರಮ ಕೈಗೊಳ್ಳುವುದು.

೨.	ತಾವು ಪ್ರತಿನಿಧಿಸಿದ ವಾರ್ಡುಗಳಿಗೆ ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯವನ್ನು ಕಾಪಾಡುವುದು.

೩.	ಪುರಸಭೆಯ ಸದಸ್ಯರು ಆಗಾಗ್ಗೆ ಸಭೆ ಸೇರಬೇಕು. ಅಭಿವೃದ್ಧಿಗೆ ಸಂಭಂಧಿಸಿದಂತೆ ತಮ್ಮ ಸಲಹೆಗಳನ್ನು ಕೊಡುವುದು.

೪.	ಆರ್ಥಿಕ ಪ್ರಗತಿ ಮತ್ತು ಸಾಮಾಜಿಕ ನ್ಯಾಯಕ್ಕೆ ಯೋಜನೆಗಳನ್ನು ಜಾರಿಗೆ ತರುವುದು.

೫.	ಪುರಸಭೆಯ ಸದಸ್ಯರು ಅಭಿವೃದ್ಧಿ ಸದಸ್ಯರಾಗಿ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣದ ಬದಿಗೆ ಸರಿಯಾಗಿ ನಿರ್ವಹಿಸಲು ಮೇಲ್ವಿಚಾರಣೆ ಮಾಡಬೇಕು.

೬	ನೈಸರ್ಗಿಕ ವಿಕೋಪ ಮತ್ತು ಅಭಾವ ಪರಿಸ್ಥಿತಿಯಲ್ಲಿ ಗ್ರಾಮಸ್ಥರಿಗೆ ಸರಕಾರದಿಂದ ನೆರವನ್ನು ಕೊಡಲು ಪ್ರಯತ್ನಿಸುವುದು.

೭	ಪುರಸಭೆಯ ಅಭಿವೃದ್ಧಿಗೆ ಬೇಕಾದ ಚರಂಡಿಗಳ ವ್ಯವಸ್ಥೆಯನ್ನು ಕಾಮಗಾರಿಯ ಮೇಲ್ವಿಚಾರಣೆ ಮಾಡುವುದು.

೮.	ಪುರಸಬೆಯ ಸದಸ್ಯರು ಹಲವಾರು ಸಮಿತಿಗಳ ಸದಸ್ಯರಾಗಿ ಕಾರ್ಯಗಳನ್ನು ನಿರ್ವಹಿಸುತ್ತಾರೆ.

೧.	ಸಾಮಾನ್ಯ ಸ್ಥಾಯಿ ಸಮಿತಿ.

೨.	ಯೋಜನೆ ಮತ್ತು ಅಭಿವೃದ್ಧಿ ಸಮಿತಿ.

೩.	ಕಾಮಗಾರಿ ಮತ್ತು ನೌಕರಿ ಸಮಿತಿ.

೪.	ಸಾಮಾಜಿಕ ನ್ಯಾಯ ಸಮಿತಿ.

೫.	ಕೈಗಾರಿಕಾ ಸಮಿತಿ

೩.೫	ಪುರಸಭೆಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಅಧಿಕಾರ ಮತ್ತು ಕಾರ್ಯಗಳು

ಪುರಸಭೆಯ ಸದಸ್ಯರು ತಮ್ಮಲ್ಲಿಯೇ ಓರ್ವರನ್ನು ಅಧ್ಯಕ್ಷರನ್ನಾಗಿ ಮತ್ತು ಇನ್ನೊಬ್ಬರನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡುವರು. ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಹುದ್ದೆಗಳಿಗೂ ಮೀಸಲಾತಿ ನಿಯಮ ಅನ್ವಯವಾಗುವುದು. ಸದಸ್ಯರು, ಅಧ್ಯಕ್ಷರು ಹಾಗೂ ಉಪಾಧ್ಯಕ್ಷರು ವಿಶ್ವಾಸ ವ್ಯಕ್ತಪಡಿಸಿ ವಿಶೇಷ ಸಭೆಯಲ್ಲಿ ಒಟ್ಟು ೨/೩ ಸದಸ್ಯರು ಬಹುಮತದಿಂದ ನಿರ್ಣಯ ಅಂಗೀಕರಿಸಿದರೆ ಅಧ್ಯಕ್ಷರು ಹಾಗೂ ಉಪಾಧ್ಯಕ್ಷರ ಸ್ಥಾನಗಳು ತೇರವಾಗುವವು.

ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಅಧಿಕಾರ ಹಾಗೂ ಕಾರ್ಯಗಳು

೧.	ಪುರಸಭೆಯ ಸಾಮಾನ್ಯ ಸಭೆಯ ಅಧ್ಯಕ್ಷತೆ ವಹಿಸುವುದು.

೨.	ಪುರಸಭೆಯ ಹಣಕಾಸಿನ ಹಾಗೂ ಕಾರ್ಯಾಂಗೀಯ ಆಟಳಿತದ ಮೇಲ್ವಿಚಾರಣೆ ಮಾಡುವುದು.

೩.	ನೈಸರ್ಗಿಕ ವಿಕೋಪ ಹಾಗೂ ಇತರ ತುರ್ತು ಪರಿಸ್ಥಿಗಳಲ್ಲಿ ಸಾರ್ವಜನಿಕರ ಆಸ್ತಿ, ಪ್ರಾಣ ಹಿತಾಸಕ್ತಿ ಕಾಪಾಡಲು ತುರ್ತುಕ್ರಮ ಕೈಗೊಳ್ಳುವುದು.

೪.	ಪುರಸಭೆ ಹಾಗೂ ಸ್ಥಾಯಿ ಸಮಿತಿಗಳ ನಿರ್ಣಯಗಳನ್ನು ಕಾರ್ಯ ರೂಪದಲ್ಲಿ ತರಲು ಆಯುಕ್ತರಿಗೆ ಅಥವಾ ಮುಖ್ಯಾಧಿಕಾರಿಗಳಿಗೆ ನಿರ್ದೇಶನ ನಿಡುವುದು.

೫.	ಅಭಿವೃದ್ಧಿ ಕಾಮಗಾರಿಯನ್ನು ಪರಿಶೀಲನೆ ಮಾಡುವುದು ಅಗತ್ಯ ಬಿದ್ದರೆ ಸೂಕ್ತ ನಿರ್ದೇಶನ ನೀಡುವುದು.

೩.೫.೧ ಸಭೆ

ಪುರಸಭೆಯ ಸಾಮಾನ್ಯ ಸಭೆಯು ಕನಿಷ್ಠ ಪಕ್ಷ ತಿಂಗಳಿಗೊಮ್ಮೆ ಜರುಗುವುದು. ಒಟ್ಟು ಸದಸ್ಯರು ೧/೩ ಸದಸ್ಯರು ಸಭೆ ನಡೆಸಲು ಅಗತ್ಯ 'ಕೋರಂ' ಎನ್ನಿಸುವರು. ಸಭೆಯಲ್ಲಿ ಚರ್ಚಿತವಾಗುವ ವಿಷಯ ಮಂಡಿತವಾಗುವ ನಿರ್ಣಯಗಳನ್ನು ಬುಕ್ ಒಂದರಲ್ಲಿ ದಾಖಲಿಸಬೇಕು.

೩.೫.೨ ಪುರಸಭೆಯ ಸಾಮಾನ್ಯ ಸಭೆ.

ಜಮಖಂಡಿ ಪುರಸಭೆಯು ೧೯೭೩ ರಲ್ಲಿ ಪುರಸಭೆ ಎಂದೂ ನಾಮಕರಣವಾಯಿತು. ಇದಕ್ಕಿಂತ ಮುಂಚೆ ಜಮಖಂಡಿ ಪಟ್ಟಣ ಪಂಚಾಯತಿ ಆಗಿತ್ತು. ಪಟ್ಟಣ ಪಂಚಾಯತಿ ೧೯೨೨ ರಲ್ಲಿ ಪ್ರಾರಂಭವಾಗಿತ್ತು. ಜಮಖಂಡಿ ಪುರಸಭೆ ಕರ್ನಾಟಕ ಪುರಸಭೆಗಳ ಅಧಿನಿಯಮ ೧೯೬೪ರ ಕಾಯ್ದೆ ಪ್ರಕಾರ ಪ್ರದೇಶದ ಜನಗಣತಿ ಆಧಾರದ ಮೇಲೆ ಪಟ್ಟಣ ಪಂಚಾಯತಿ ಎಂದೂ ನಿರ್ಧರಿಸಲಾಯಿತು. ೧೯೭೩ ರಲ್ಲಿ ಪಟ್ಟಣ ಪಂಚಾಯತಿಯ ಸದಸ್ಯರು ಪುರಸಭೆಯ ಸದಸ್ಯರಾದರು. ಈ ವೇಳೆಯಲ್ಲಿ ಶೀ.ಎಸ್.ಡಿ.ಪೆಂಡ್ಸೆ ಪ್ರಥಮ ಅಧ್ಯಕ್ಷರಾಗಿ ನೇಮಕಗೊಂಡರು. ಜನಗಣತಿಯ ಆಧಾರದ ಮೇಲೆ ಜಮಖಂಡಿ ಪಟ್ಟಣದ ವಾರ್ಡುಗಳನ್ನು ವಿಂಗಡಿಸಿ, ೨೩ ವಾರ್ಡುಗಳನ್ನಾಗಿ ಮಾಡಿ ವಾರ್ಡುಗಳಿಗೆ ಸರಕಾರದ ನಿಯಮದಂತೆ ಚುನಾವಣೆ ಜರುಗಿತು.

ಪುರಸಭೆ ಪ್ರತಿ ತಿಂಗಳು ಜರುಗುವ ಸಾಮಾನ್ಯ ಸಭೆಗೆ ಪ್ರತಿ ಚುನಾಯಿತ ಸದಸ್ಯರು ಹಾಜರಾಗಿರಬೇಕು. ಒಂದು ವೇಳೆ ಯಾವುದೇ ಸದಸ್ಯರು ತಮ್ಮ ವೈಯಕ್ತಿಕ ಕಾರ್ಯ ನಿಮಿತ್ತ ಕೇಂದ್ರ ಸ್ಥಳಗಳಿಂದ ಹೊರಗಿದ್ದರೆ ಅಂಥವರು ಮುಂಚಿತವಾಗಿ ಪುರಸಭಾದ್ಯಕ್ಷರಿಗೆ ರಜಾವರಧಿಯನ್ನು ಸಲ್ಲಿಸಬೇಕು. ಚುನಾಯಿತ ಸದಸ್ಯರು ಮೂರು ಸಾಮಾನ್ಯ ಸಭೆಗಳಿಗಿಂತ ಹೆಚ್ಚಿಗೆ ಗೈರು ಹಾಜರಾದಲ್ಲಿ ಪುರಸಭೆಯ ಮುಖ್ಯಾಧಿಕಾರಿ ಮಾನ್ಯ ಜಿಲ್ಲಾದಿಕಾರಿಗಳಿಗೆ ಪ್ರಸ್ತಾವಣೆ ಸಲ್ಲಿಸಿದಾಗ ಮಾನ್ಯ ಜಿಲ್ಲಾದಿಕಾರಿಗಳು ಇವರ ಸದಸ್ಯತ್ವವನ್ನು ರದ್ದು ಗೊಳಿಸಿ ಮುಂದಿನ ಕ್ರಮ ಕೈಗೊಳ್ಳುವ ಅಧಿಕಾರಿ ಇದೆ.

ಸಾಮಾನ್ಯ ಸಭೆ ಪುರಸಭೆಯವರು ದಿನ ನಿತ್ಯದ ಹಾಗೂ ಸರಕಾರದ ಯೋಜನೆಗಳ ಜಮಾ ಖರ್ಚು ಕಾಮಗಾರಿಗಳ ಪುರಸಭೆಯು ವಸೂಲು ಮಾಡಲು ಎಲ್ಲಾ ಆಸ್ತಿಕರಗಳನ್ನು ಹಾಗೂ ಪ್ರತಿಯೊಂದು ಸಭೆಯಲ್ಲಿ ಮುಖ್ಯಾಧಿಕಾರಿಗಳು ಸಭೆಯನ್ನು ಮಂಡಿಸಬೇಕು.

೩.೫.೩ ಪುರಸಭೆ ಸಭೆ ಕರೆಯುವ ವಿಧಾನ.

ಪುರಸಭೆಯವರು ಸಾಮಾನ್ಯ ಸಭೆಯ ದಿನಾಂಕವನ್ನು ನಿಗದಿಪಡಿಸುವ ಅಧಿಕಾರಿ ಅಧ್ಯಕ್ಷರಿಗೆ ಇರುತ್ತದೆ. ಇವರು ನಿಗದಿಪಡಿಸಿದ ನಂತರ ಮುಖ್ಯಾಧಿಕಾರಿಗಳು ಸಭೆಯ ವಿಷಯ ಪಟ್ಟಿ ತಯಾರಿಸಿ, ಎಲ್ಲಾ ಸದಸ್ಯರಿಗೆ ೭ ದಿನಗಳು ಮುಂಚಿತವಾಗಿ ವಿಷಯ ಪಟ್ಟಿಯನ್ನು ಸಲ್ಲಿಸಬೇಕು. ನಿಗದಿ ಪಡಿಸಿದ ದಿನಾಂಕದಂದು ಎಲ್ಲ ಸದಸ್ಯರು ಸಭೆ ಪ್ರಾರಂಭಿಸುತ್ತಾರೆ. ಸಾಮಾನ್ಯ ಸಭೆಯ ಬಿಟ್ಟು ಸದಸ್ಯರ ೨/೩ ಬಹುಮತ ಸದಸ್ಯರು ಇರಬೇಕಾಗುತ್ತದೆ. ಸದಸ್ಯರ ಸಂಖ್ಯೆ ೨೩ ಇದ್ದು ಕನಿಷ್ಟ ೧೧ ಸದಸ್ಯರ ಹಾಜರಿದ್ದಲ್ಲಿ 'ಕೋರಂ' ಭರ್ತಿ ಆದ ನಂತರ ಅಧ್ಯಕ್ಷರು ಸಭೆ ಪ್ರಾರಂಭಿಸಬೇಕು.

ಸಾಮಾನ್ಯ ಸಭೆಗೆ ನಿಗದಿ ಪಡಿಸಿದ ದಿನಾಂಕದಂದು ಅಧ್ಯಕ್ಷರು ಸಭೆಗೆ ಸಲ್ಲಿಸಿದ್ದಲ್ಲಿ, ಆ ಹೊತ್ತಿನ ದಿವಸ ಕೂಡಿದ್ದ ಸದಸ್ಯರು ಉಪಾಧ್ಯಕ್ಷರಿಗೆ ಅಧ್ಯಕ್ಷ ಸ್ಥಾನ ನೀಡಿ ಆ ಸಭೆ ಜರುಗಿಸುತ್ತಾರೆ. ಒಂದು ವೇಳೆ ಅಧ್ಯಕ್ಷರು ಉಪಾಧ್ಯಕ್ಷರ ರಜೆ ವರದಿ ಸಲ್ಲಿಸಿದ್ದಲ್ಲಿ ೨/೩ ಸದಸ್ಯರು ಹೊಂದಿದ್ದ ಸದಸ್ಯರಲ್ಲಿ ಯಾರನ್ನಾದರು ಒಬ್ಬರನ್ನು ಅಧ್ಯಕ್ಷರನ್ನಾಗಿ ಮಾಡಿ ಸಭೆ ನಡೆಸಬಹುದು.

೩.೫.೪ ಪುರಸಭೆಯ ಸಾಮನ್ಯ ಸಭೆಗಳನ್ನು ನಡೆಸುವುದು.

೧. ಸಾಮಾನ್ಯ ಸಭೆಯಲ್ಲಿ ವ್ಯವಹಾರವನ್ನು ಈ ಕೆಳಕಂಡ ಕ್ರಮದಲ್ಲಿ ನಡೆಸತಕ್ಕದ್ದು.

ಅ) ಹಿಂದಿನ ಸಾಮಾನ್ಯ ಸಭೆಯ ಮತ್ತು ಆನಂತರ ನಡೆದ ಯಾವುದೇ ವಿಶೇಷ ಸಭೆಯ ನಡುವಳಿಕೆಗಳನ್ನು ಸ್ವಿಕರಿಸತಕ್ಕದ್ದು.

ಆ) ಹಿಂದಿನ ಸಭೆಯಲ್ಲಿ ಮುಂದಿಡಲಾದ ವ್ಯವಹಾರವನ್ನು ಪರ್ಯಾಯ ಆಲೋಚಿಸತಕ್ಕದ್ದು.

ಇ) ಕಾರ್ಯ ಸೂಚಿಯಲ್ಲಿ ಸೂಚಿಸಿದ ವಿಷಯಗಳನ್ನು ಆನಂತರ ಪರ್ಯಾಯ ಆಲೋಚಿಸತಕ್ಕದ್ದು.

೨. ಪುರಸಭೆಯ ಕೌನ್ಸಿಲರನ ವ್ಯವಹಾರದ ಪಟ್ಟಿಯಲ್ಲಿ ಸೇರಿಸಲಾದ ವಿಷಯಗಳಿಗೆ ಸಂಭಂದಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ಯಾವುದೇ ನಿರ್ಣಯವನ್ನು ಪ್ರೋತ್ಸಾಹಿಸಬಹುದು. ಅಧ್ಯಕ್ಷರನ್ನು ವ್ಯವಹಾರದ ಪಟ್ಟಿಯಲ್ಲಿ ಮಾಮೂಲಿ ಸ್ವರೂಪದ ಯಾವುದೇ ಜರುಗುವ ವಿಷಯವನ್ನು ಯಾವನೇ ಕೌನ್ಸಿಲರನು ಅದಕ್ಕೆ ಅಪೇಕ್ಷ ಮಾಡದಿದ್ದರೆ ಪ್ರಸ್ತಾಪ ಮಾಡಬಹುದು.

೩. ಎಲ್ಲ ಕ್ರಿಯಾಲೋಪಗಳನ್ನು ಅಧ್ಯಕ್ಷತೆ ವಹಿಸಿದ ಪ್ರಾಧಿಕಾರಿಯು ತಾನು ಸೂಕ್ತನೆಂದು ಭಾವಿಸಬಹುದಾದಂಥ ಚರ್ಚೆಯೊಂದಿಗೆ ಅಥವಾ ಇಲ್ಲದೇ ತೀರ್ಮಾನಿಸತಕ್ಕದ್ದು. ಮತ್ತು ಅವನ ತಿರ್ಮಾನವು ಅಂತಿಮವಾಗಿರತಕ್ಕದ್ದು.

೪. ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿತವಾದ ನಿಯಮಗಳಲ್ಲಿ ಸಂಬಂಧಿಸಿದ್ದು, ಪ್ರಕ್ರೀಯೆಯು ಯಾವುದೇ ಪ್ರಶ್ನೆಯನ್ನು ಹಾಜರಿದ್ದು ಮತ್ತು ಮತ ನೀಡುವ ಕೌನ್ಸಿಲರಗಳ ಬಹು ಮತದ ಮೂಲಕ ತೀರ್ಮಾನಿಸತಕ್ಕದ್ದು.

೩.೫.೫ ಸ್ಥಾಯಿ ಸಮಿತಿ.

ಪ್ರತಿಯೊಂದು ಪುರಸಭೆಯಲ್ಲಿ ನಾಲ್ಕು ಸ್ಥಾಯಿ ಸಮಿತಿಗಳು ಇರುತ್ತವೆ. ಅವುಗಳೆಂದರೆ:

೧. ತೆರಿಗೆ ಹಣಕಾಸು ಹಾಗೂ ಮನವಿ ಸಮಿತಿ.

೨. ಸಾರ್ವಜನಿಕ ಆರೋಗ್ಯ, ಶಿಕ್ಷಣ ಸಾಮಾಜಿಕ ನ್ಯಾಯ ಸಮಿತಿ.

೩. ನಗರ ಯೋಜನೆ ಹಾಗೂ ಸುಧಾರಣಾ ಸಮಿತಿ.

೪. ಲೆಕ್ಕ ಪತ್ರಗಳ ಸಮಿತಿ.

೩.೬ ಪುಸಭೆಯ ಅಧಿಕಾರಿಗಳು ಹಾಗೂ ಕಾರ್ಯಗಳು.

ಪುರಸಭೆಯ ಕಡ್ಡಾಯ ಹಾಗೂ ಐಚ್ಛಿಕ ಕಾರ್ಯಗಳನ್ನು ನಿರ್ವಹಿಸುತ್ತದೆ.

೩.೬.೧ (ಅ) ಕಡ್ಡಾಯ ಕಾರ್ಯಗಳು

ಪುರಸಭೆಯ ಕಡ್ಡಾಯ ಕಾರ್ಯಗಳನ್ನು ಈ ಕೆಳಗಿನಂತೆ ವಿವರಿಸುವುದು.

೧. ಶುದ್ಧ ಕುಡಿಯುವ ನೀರಿನ ಪೂರೈಕೆ ಮಾಡುವುದು.

೨. ಸಾರ್ವಜನಿಕ ಬೀದಿ ಕಟ್ಟಡಗಳಿಗೆ ದೀಪದ ವ್ಯವಸ್ಥೆ.

೩. ಬೀದಿಗಳಿಗೆ ನಾಮಕರಣ ಹಾಗೂ ಮನೆ ಸಂಖ್ಯೆ ಕೊಡುವುದು.

೪. ಸಾಂಕ್ರಾಮಿಕ ರೋಗಗಳನ್ನು ತಡೆಯಲು ಯೋಗ್ಯಕ್ರಮ ಕೈಗೊಳ್ಳುವುದು.

೫. ಸಾರ್ವಜನಿಕರಿಗೆ ಚುಚ್ಚು ಮದ್ದು ಹಾಕಿಸುವುದು.

೬ ಸಾರ್ವಜನಿಕ ರಸ್ತೆ ನಿರ್ಮಾಣ ಹಾಗೂ ರಿಪೇರಿ (ದುರಸ್ತಿ) ಕಾರ್ಯ.

೭ ಅನಾರೋಗ್ಯಕರ ಸ್ಥಳಗಳನ್ನು ಸ್ವಚ್ಛಗೊಳಿಸುವುದು.

೮. ಅಪಾಯ ಕಾರಿ ಸ್ಥಳ, ಕಟ್ಟಡಗಳನ್ನು ಭದ್ರಗೊಳಿಸುವುದು, ಅಗತ್ಯ ಬಿದ್ದರೆ ತೆಗೆದುಹಾಕುವುದು.

೯. ಕಸಾಯಿಖಾನೆ, ಶೌಚಾಲಯ, ಮೂತ್ರಾಲಯ ಕಟ್ಟಿಸುವುದು.

೧೦. ಜನನ ಮತ್ತು ಮರಣ ದಾಖಲೆಪಡಿಸುವುದು.

೧೧. ಸಾರ್ವಜನಿಕ ಸ್ಥಳಗಳಲ್ಲಿ ತೊಂದರೆಯನ್ನು ಹೋಗಲಾಡಿಸುವುದು.

೧೩. ಮದುವೆಗಳ ನೊಂದಣಿ ಮಾಡುವುದು.

೧೪. ಬೆಂಕಿ ಹತ್ತಿದಾಗ ಬೆಂಕಿ ಆರಿಸಿ ಸಾರ್ವಜನಿಕರಿಗೆ ಜೀವನ ಮತ್ತು ಆಸ್ತಿಯನ್ನು ರಕ್ಷಿಸುವುದು.

೧೫. ಪುರಸಭೆಯ ಹದ್ದಿಯಲ್ಲಿರುವ ಮಾರುಕಟ್ಟೆ, ಮಾಂಸದ ಅಂಗಡಿಗಳು, ಕಾರಂಜಿಗಳು, ವ್ಯಾಯಾಮ ಶಾಲೆ, ಬಾವಿಗಳು, ಕೆರೆಗಳು, ಡ್ಯಾಮ್ ಮುಂತಾದವುಗಳನ್ನು ಕಟ್ಟುವುದು, ಮತ್ತು ಅವುಗಳನ್ನು ರಕ್ಷಿಸುವುದು.

೩.೬.೧ (ಆ) ಸಾರ್ವಜನಿಕರಿಗೆ ಆರೋಗ್ಯ ಕಾರ್ಯಗಳು.

೧. ಜನನ ಮತ್ತು ಮರಣಗಳ ನೋಂದಣಿ.

೨. ಸಾರ್ವಜನಿಕರಿಗೆ ದೇವಿ ಹಾಕುವುದು.

೩. ಸಾರ್ವಜನಿಕರಿಗೆ ಆಸ್ಪತ್ರೆ ಮತ್ತು ದವಾಖಾನೆ ನಿರ್ಮಿಸುವುದು.

೪. ಸಾರ್ವಜನಿಕರಿಗೆ ಔಷದೋಪಕಾರ ಒದಗಿಸುವುದು.

೫. ಹುಚ್ಚು ನಾಯಿ ಕಡಿತದವರಿಗೆ ಚಿಕಿತ್ಸೆ ಕೊಡುವುದು.

೬. ಹುಚ್ಚರಿಗೆ ಮತ್ತು ಕುಷ್ಠರೋಗಗಳಿಗೆ ಸೌಲಭ್ಯ ಒದಗಿಸುವುದು.

೭ ಗಂಡಾಂತರಕಾರಿ ರೋಗ ಬಂದಾಗ ವಿಶೇಷ ಔಷದೋಪಚಾರ ನೀಡುವುದು.

೮. ಬರಗಾಲದಲ್ಲಿ ಉಪಚಾರ ಕೆಲಸಗಳನ್ನು ಮಾಡುವುದು.

೩.೬.೨ ವಿವೇಚನಾತ್ಮಕ ಕಾರ್ಯಗಳು.

೧. ಸಾರ್ವಜನಿಕ ಉಧ್ಯಾನ ತೋಟ ಗ್ರಂಥಾಲಯಗಳ, ಸಭಾಂಗಣ ಮಾನಸಿಕ ಆಸ್ಪತ್ರೆ, ಧರ್ಮ ಶಾಲೆ ನಿರ್ಮಾಣ.

೨. ನಿರ್ಗತಿಕ ಮಹಿಳೆಯರಿಗೆ ಆಶ್ರಯ ಒದಗಿಸುವುದು.

೩. ಬಡತನ ನಿರ್ಮೂಲನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.

೪. ರಸ್ತೆಯ ಎಡ ಬದಿಗಳಲ್ಲಿ ಸಸ್ಯಗಳನ್ನು ನೆಡುವುದು ಮತ್ತು ಕಾಪಾಡುವುದು.

೫. ಸಾಂಸ್ಕೃತಿಕ ಇತರ ರಚನಾತ್ಮಕ ಕಾರ್ಯಗಳಿಗೆ ಉತ್ತೇಜನ ನೀಡುವುದು.

೬ ಅಂಬ್ಯುಲೆನ್ಸ್ ಸೇವೆ ಒದಗಿಸುವುದು.

೭ ಪುರಸಭೆಯ ಸಾರಿಗೆ ಸೌಲಭ್ಯಗಳ ವ್ಯವಸ್ಥೆ.

೮. ಜನರಿಗೆ ಸಂಗೀತ ಒದಗಿಸುವುದು.

೯. ಜನಗಣತಿಯ ಸಮೀಕ್ಷೆ ಮಾಡುವುದು.

೧೦. ಮೆಯ್ಯುವ ಮೈದಾನ ಮತ್ತು ಹಾಲಿನ ಕೇಂದ್ರಗಳನ್ನು ರಕ್ಷಿಸುವುದು.

೧೧. ಕೊಳಚೆಯನ್ನು ನಿವಾರಿಸಲು ತೋಟ ಅಥವಾ ಕಾರ್ಖಾನೆಯನ್ನು ಸ್ಥಾಪಿಸುವುದು

೧೨. ಶೈಕ್ಷಣಿಕ ಮುಂದುವರಿಕೆಯ ಉದ್ದೇಶಗಳು.

೩.೭ ಪುರಸಭೆಯ ಸ್ವತ್ತು ಮತ್ತು ನಿಧಿಗಳು

೧. ಪ್ರತಿಯೊಂದು ಮುನ್ಸಿಪಲ್ ಕೌನ್ಸಿಲರ ಈ ಅಧಿನಿಯಮ ಉದ್ದೇಶಕ್ಕಾಗಿ ಪೌರಸಭೆ ಪರಿಮಿತಿ ಒಳಗೆ ಆಗಲಿ ಅಥವಾ ಹೊರಗೆ ಆಗಲಿ ಚರಸ್ಥಿರ ಸ್ವತ್ತುಗಳನ್ನು ಅರ್ಜಿಸಬಹುದು ಮತ್ತು ಹೊಂದಿರಬಹುದು.

೨. ಇದರಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಸರಕಾರದಿಂದ ವಿಶಿಷ್ಟ ಕಾಯ್ದಿರಿಸಿದ ಸ್ವರೂಪದಲ್ಲಿ ಎಲ್ಲ ಸ್ವತ್ತು ಮುನ್ಸಿಪಲ್ ಕೌನ್ಸಿಲರ ಹಿತವಾಗಿರತಕ್ಕದ್ದು ಮತ್ತು ಅದಕ್ಕೆ ಸೇರತಕ್ಕದ್ದು ಮತ್ತು ಇದು ಸರಕಾರದಿಂದ ವಿಶಿಷ್ಟವಾಗಿ ಕಾಯ್ದಿರಿಸಿದ ಮುನ್ಸಿಪಲ್ ಕೌನ್ಸಿಲರಗಳಲ್ಲಿ ಸಹಿತವಾಗತಕ್ಕದ್ದು, ಮತ್ತು ಅದಕ್ಕೆ ಸೇರತಕ್ಕದ್ದು. ಮತ್ತು ಇದು ಸರಕಾರದಿಂದ ವಿಶೇಷವಾಗಿ ಕಾಯ್ದಿರಿಸಿದ ಮುನ್ಸಿಪಲ್ ಕೌನ್ಸಿಲರಗಳಲ್ಲಿ ನಿಹಿತವಾಗಬಹುದಾದಂಥ ಯವುದೇ ಸ್ವರೂಪದ ಅಥವಾ ಬಗೆಯ ಇತರ ಎಲ್ಲ ಸ್ವತ್ತಿನೊಂದಿಗೆ ಅದರ ನಿರ್ದೇಶನ ವ್ಯವಸ್ಥಾಪನೆ ಮತ್ತು ನಿಯಂತ್ರಣದಲ್ಲಿ ಇರತಕ್ಕದ್ದು. ಮತ್ತು ಅದು ಈ ಅಧಿನಿಯಮದ ಉಪ ಸಭೆಗಳ ಉದ್ದೇಶಗಳಿಗೆ ಒಳಪಟ್ಟಿರಬೇಕು.

ಅ. ಎಲ್ಲ ಸಾರ್ವಜನಿಕ ಪಟ್ಟಣ ಗೋಡೆಗಳು, ಗೀಟುಗಳು, ಮಾರುಕಟ್ಟೆಗಳು, ಕಸಾಯಿಖಾನೆಗಳಿಗೂ, ಗೊಬ್ಬರ ಮತ್ತು ಮರದ ಡೀಪೋಗಳು ಮತ್ತು ಪ್ರತಿಯೊಂದು ವಿವರಣೆ ಸಾರ್ವಜನಿಕ ಕಟ್ಟಡಗಳು.

ಆ. ಎಲ್ಲ ಸಾರ್ವಜನಿಕ ತೊರೆಗಳು, ಕೆರೆಗಳು, ಜಲಾಶಯಗಳು, ನೀರು, ತೊಟ್ಟಿಗಳು, ಭಾವಿಗಳು, ಚಿಲುಮೆಗಳು, ಮೆಲ್ಗಾಲುವೆಗಳು, ನಳಿಕೆಗಳು, ಸುರಂಗಗಳು, ಪಂಪುಗಳು ಮತ್ತು ಇತರೆ ನೀರು ಕಾಮಗಾರಿಗಳು ಮತ್ತು ಎಲ್ಲ ಸೇತುವೆಗಳು ಕಟ್ಟಡಗಳು, ಇಂಜಿನುಗಳು ಮತ್ತು ಅದಕ್ಕೆ ಸಂಬಂಧಿಸಿದ ಅಗತ್ಯವಾದ ಸಾಮಗ್ರಿಗಳು ಮತ್ತು ವಸ್ತುಗಳು ಯಾವುದೇ ಸಾರ್ವಜನಿಕ ಕೆರೆ, ಅಥವಾ ಭಾವಿ ಸೇರಿರುವ ಖಾಸಗಿ ಸ್ವತ್ತಲ್ಲದ ಯಾವುದೇ ಪಕ್ಕದ ಭೂಮಿಯೂ ಸಹ.

ಇ. ಎಲ್ಲ ಸಾರ್ವಜನಿಕ ದೀಪಗಳು, ದೀಪದ ಕಂಬಗಳು ಮತ್ತು ಅವುಗಳಿಗೆ ಜೋಡಿಸಿದ ಅಥವಾ ಅವುಗಳಿಗೆ ಸೇರಿರುವ ಸಾಧನ ಸಾಮಗ್ರಿಗಳು.

ಈ. ಸ್ಥಳೀಯ ಸಾರ್ವಜನಿಕ ಉದ್ದೇಶಗಳಿಗಾಗಿ ದಾನ, ಅನ್ಯತಾ ಸರಕಾರವು ಅದಕ್ಕೆ ವರ್ಗಾಯಿಸಿದ ಎಲ್ಲ ಭೂಮಿ ಮತ್ತು ಕಟ್ಟಡಗಳು.

ಉ. ಎಲ್ಲ ಸಾರ್ವಜನಿಕ ಬಿದಿಗಳು, ಮತ್ತು ನೆಲ ಕಟ್ಟಡಗಳು, ಕಲ್ಲುಗಳು, ಮತ್ತು ಅವುಗಳ ಸಾಮಗ್ರಿಗಳು ಉಪಕರಣಗಳು ಮತ್ತು ಅಂಥ ಬೀದಿಗಳಿಗೆ ಒದಗಿಸುವ ವಸ್ತುಗಳು.

೧೯೭೨ (೨) ಮೈಸೂರು ಲಾ ಜರ್ನಲ್ ಪುಟ ೧೩೦ ಪರಂತು ಈ ಖಂಡದ ಮೇರೆಗೆ ಸರ್ಕಾರವು ಮುನ್ಸಿಪಲ್ ಕೌನ್ಸಿಲಗೆ ವರ್ಗಾಯಿಸಿದ ಭೂಮಿಗಳು ವರ್ಗಾವಣೆ ಲಿಖಿತದಲ್ಲಿ ಅನ್ಯತಾ ಸ್ಪಷ್ಟವಾಗಿ ಉಪಬಂಧಿಸಿದ ಹೊರತು ಪುರಸಭೆಯ ಒಡೆತನದ ಹಕ್ಕಿನ ಮೂಲಕ ಸೇರತಕ್ಕದಲ್ಲ. ಆದರೆ ವರ್ಗಾವಣೆ ನಿಬಂದನೆಗಳು ಮತ್ತು ಶರತ್ತುಗಳಿಗೆ ಒಳಪಟ್ಟು ಅದರಲ್ಲಿ ಸಹಿತವಾಗತಕ್ಕದ್ದು. ಸದರಿ ಯಾವುದೇ ನಿರ್ಬಂದನೆ ಅಥವಾ ಶರತ್ತಿನ ಉಲ್ಲಂಘನೆ ಯಾದಲ್ಲಿ ಅದರ ಮೇಲಿರುವ ಎಲ್ಲ ಜೋಡಣೆಗಳು ಮತ್ತು ರಚನೆಗಳನ್ನು ಒಳಗೊಂಡು ಅದಕ್ಕೆ ಅಗತ್ಯವಾಗಿರುವ ಎಲ್ಲ ವಸ್ತುಗಳೊಂದಿಗೆ ಭೂಮಿಗಳು ಸರ್ಕಾರದಲ್ಲಿ ಸಹಿತವಾಗತಕ್ಕದು. ಮತ್ತು ಅದರ ಸ್ವಾದೀನವನ್ನು ಪನಃ ಪಡೆಯಲು ಕಾನೂನು ಸಮ್ಮತವಾಗಿರತಕ್ಕದು.

ಐ.ಎಲ್.ಆರ್.೧೯೯೦ ಕರ್ನಾಟಕ ಪುಟ ೧೭೦೩

ಈ ಪ್ರಕರಣದ ಮೇರೆಗೆ ಮುನ್ಸಿಪಲ್ ಕೌನ್ಸಿಲನಲ್ಲಿ ನಿಹಿತವಾದ ಅಥವಾ ನಿಹಿತವಾಗುವ ಯಾವುದೇ ಸ್ವತ್ತನ್ನು ಸರ್ಕಾರವು ನಿರ್ಧರಿಸಬಹುದಾದ ನಿಬಂಧನೆಗಳ ಮೇಲೆ ಅಧಿಸೂಚನೆ ಮೂಲಕ ಕಾಲ ಕಾಲಕ್ಕೆ ತೆಗೆದು ಕೊಳ್ಳುವುದು. ಸರ್ಕಾರಕ್ಕೆ ಸುಕ್ಷೇಮವಾಗಿರತಕ್ಕದು ಈ ಎಲ್ಲ ಸ್ವತ್ತುಗಳು ಕರ್ನಾಟಕ ಪೌರಸಭೆಗಳ ಅಧಿನಿಯಮ ೧೯೬೪ ರ ಕಾಯ್ದೆ ಅನ್ವಯವಾಗಿರುತ್ತದೆ.

## ಪುರಸಭೆಯ ನಿಧಿಗಳು :

೧. ಕಟ್ಟಡ ಮತ್ತು ಭೂಮಿಗಳ ಮೇಲಿನ ತೆರಿಗೆ

೨. ಜಾತ್ರೆ, ಉರುಸು, ಸಂತೆ, ಇತ್ಯಾದಿಗಳಿಗೆ ಸಂಬಂಧಿಸಿದ ಶುಲ್ಕ

೩. ಲೇಸನ್ಸ್ ನೀಡಲು ವಿಧಿಸುವ ಶುಲ್ಕ

೪. ನೀರಿನ ಉಪಯೋಗಕ್ಕಾಗಿ ವಿಧಿಸುವ ಶುಲ್ಕ

೫. ಕಟ್ಟಡ ಹಾಗೂ ಖಾಲಿ ನಿವೇಶನಗಳಿಂದ ಬರುವ ಬಾಡಿಗೆ

೬. ಸರ್ಕಾರದಿಂದ ಬರುವ ಸಹಾಯಧನ

೩.೮ ಪುರಸಭೆಗೆ ಓರ್ವ ಮುಖ್ಯಾಧಿಕಾರಿ

ಪುರಸಭೆಗೆ ಒಬ್ಬ ಮುಖ್ಯಾಧಿಕಾರಿಯನ್ನು ನೇಮಕ ಮಾಡುತ್ತಾರೆ. ಇವರು ಪೌರ ಸಭೆಗಳಿಗೆ ಹಾಜರಾಗುವರು. ನಿರ್ಣಯ ಮಂಡಿಸುವ ಹಾಗೂ ಮತದಾನದ ಹಕ್ಕನ್ನು ಹೊಂದಿರುವುದಿಲ್ಲ. ಪೌರಸಭೆಗೆ ಮಂಜೂರು ಮಾಡುವ ಯಾವುದೇ ಪರವಾನಿಗೆ ಲೈಸನ್ಸ ಅನ್ನು ನೀಡುವ ಅಧಿಕಾರ ಇವರಿಗೆ ಇರುತ್ತದೆ. ಅನುಮೋದಿತ ಕಾಮಗಾರಿಗೆ ಟೆಂಡರ ಕರೆಯುವ ಅಧಿಕಾರ ಹೊಂದಿರುವರು.

ಮುಖ್ಯಾಧಿಕಾರಿಯ ಕರ್ತವ್ಯಗಳು

೧) ಮುನ್ಸಿಪಲ್ ಕೌನ್ಸಿಲನ ನಿಯಂತ್ರಣ ಒಳಪಟ್ಟ ಈ ಅಧಿನಿಯಮದ ಮೂಲಕ ಅವನಿಗೆ ನಿರ್ಧಿಷ್ಟವಾಗಿ ವಿಧಿಸಿದ ಅಥವಾ ಪ್ರಧಾನ ಮಾಡಿದ ಅಥವಾ ಅದರ ಮೇರೆಗೆ ಅವನಿಗೆ ಪ್ರತ್ಯಾಯೋಜಿಸಿದ ಎಲ್ಲ ಕರ್ತವ್ಯಗಳನ್ನು ನೇರವೆರಿಸತಕ್ಕದು.

೨) ಸಂದರ್ಭ ಅನುಸಾರ ಮುನ್ಸಿಪಲ್ ಕೌನ್ಸಿಲನ ಅಥವಾ ಮುನ್ಸಿಪಲ್ ಕೌನ್ಸಿಲನ ಸ್ಥಾಯಿ ಸಮಿತಿ ಆದೇಶಗಳಿಗೆ ಒಳ ಪಟ್ಟಂತೆ ಲೆಕ್ಕ ಪರಿಶೋಧಕನು ತೋರಿಸಿದ ಯಾವುದೇ ಅಕ್ರಮತೆಯನ್ನು ನಿವಾರಿಸಲು ತ್ವರಿತ ಕ್ರಮಗಳನ್ನು ಕೈಗೊಳ್ಳತಕ್ಕದು.

೩) ಮೋಸದ ಅಪರಾಧಿತ ದುರ್ವಿನಿಯೋಗ, ಪುರಸಭಾ ಹಣ, ಅಥವಾ ಸ್ವತ್ತಿನ ಕಳವು ಅಥವಾ ನಷ್ಟದ ಎಲ್ಲಾ ಪ್ರಕರಣಗಳನ್ನು ಅಧ್ಯಕ್ಷನಿಗೆ ಸ್ಥಾಯಿ ಸಮಿತಿಗೆ ಮತ್ತು ಮುನ್ಸಿಪಲ್ ಕೌನ್ಸಿಲಗೆ ವರದಿ ಮಾಡತಕ್ಕದು.

೪) ಮುನ್ಸಿಪಲ್ ಕೌನ್ಸಿಲನ ಅಥವಾ ಸ್ಥಾಯಿ ಸಮಿತಿ ಕೇಳಿದ ಮುನ್ಸಿಪಲ್ ಕೌನ್ಸಿಲ್ ಅಂದಾಜು ಅಂಕಿ ಅಂಶಗಳು, ಲೆಕ್ಕ ವಿವರ ಪಟ್ಟಿ ವಿವರಣಾ ಪತ್ರ, ವರದಿ ಅಥವಾ ತನ್ನ ವಶದಲ್ಲಿರುವ ಯಾವುದೇ ದಸ್ತಾ ವೇಜಿನ ಪ್ರತಿಯನ್ನು ಒದಗಿಸತಕ್ಕದು. ಮತ್ತು ಅವುಗಳ ಮೇಲೆ ಮುನ್ಸಿಪಲ್ ಕೌನ್ಸಿಲು ಅಥವಾ ಸ್ಥಾಯಿ ಸಮಿತಿಯು ಮಾಡಿದ ಯಾವುದೇ ಆದೇಶಗಳನ್ನು ಪಾಲಿಸತಕ್ಕದು.

೫) ಈ ಬಗ್ಗೆ ನಿಯಮಿಸಲಾದ ನಿಯಮಗಳಿಗೆ ಒಳಪಟ್ಟ ಕಾರ್ಯ ನಿರ್ವಾಹಕ ಆಡಳಿತ ವಿಷಯದಲ್ಲಿ ಮತ್ತು ಪುರಸಭೆಯ ಮುನ್ಸಿಪಲ್ ಕೌನ್ಸಿಲನ ಲೆಕ್ಕ ಪತ್ರಗಳು ಮತ್ತು ದಾಖಲೆಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಪುರಸಭೆಯ ಎಲ್ಲ ಅಧಿಕಾರಿಗಳು ನಿಯಂತ್ರಣವನ್ನು ಚಲಾಯಿಸತಕ್ಕದು. ಮತ್ತು ಮುಖ್ಯಾಧಿಕಾರಿಗೆ ಆಧಿನವಾಗಿರುವ ಅಧಿಕಾರಿಗಳು ಮತ್ತು ನೌಕರುಗಳಿಗೆ ಮತ್ತು ಅವರ ವೇತನ, ವಿಶೇಷಾಧಿಕಾರಿಗಳು ಮತ್ತು ಭತ್ಯೆಗಳಿಗೆ ಸಂಬಂಧ ಪಟ್ಟ ಎಲ್ಲ ಪ್ರಶ್ನೆಗಳನ್ನು ವಿಲೇಮಾಡತಕ್ಕದು.

ಪುರಸಭೆಯ ಮುಖ್ಯಾಧಿಕಾರಿಯ ಅಧಿಕಾರಗಳು :

ಮುನ್ಸಿಪಲ್ ಕೌನ್ಸಿಲನ ನಿಯಂತ್ರಣಗೊಳಪಟ್ಟು ಮುಖ್ಯಾಧಿಕಾರಿಯು ಇಲ್ಲಿ ಇನ್ನು ಮುಂದೆ

ನಿರ್ಧಿಷ್ಟ ಪಡಿಸಿದ ಅಧಿಕಾರಗಳನ್ನು ಮತ್ತು ಅಧಿನಿಯಮದ ಉಪಬಂಧಗಳ ಮೇರೆಗೆ ಮುನ್ಸಿಪಲ್ ಕೌನ್ಸಿಲು ಪ್ರತ್ಯಾಯೋಜಿಸಬಹುದಾದಂತಃ ಇತರ ಅಧಿಕಾರಗಳನ್ನು ಚಲಾಯಿಸತಕ್ಕದು.

೧. ಈ ಅಧಿನಿಯಮದ ಮತ್ತು ಅದರ ಮೇರೆಗೆ ತಾತ್ಕಾಲದಲ್ಲಿ ಜಾರಿಯಲ್ಲಿರುವ ಅಧಿನಿಯಮಗಳು ಮತ್ತು ಉಪವಿಧಿಗಳ, ಉಪಬಂಧಗಳಿಗೆ ಒಳಪಟ್ಟು ಈ ಅಧಿನಿಯಮದ ಮೇರೆಗೆ ಮುನ್ಸಿಪಲ್ ಕೌನ್ಸಿಲು ಮಂಜೂರು ಮಾಡಬಹುದು.

೨. ಹಿಂದೆ ಹೇಳಿದ ಒಳ ಪಟ್ಟು ಅವನು ಯಾವ ಸಂದರ್ಭದಲ್ಲಿ ಹಿಂದೆ ಹೇಳಿದಂತೆ ಲೈಸನ್ಸನ್ನು ಮಂಜೂರು ಮಾಡಿ ಕೊಡಲು ಅವನನ್ನು ಶಕ್ತಗೊಳಿಸಲಾಗಿದೆಯೋ ಅಥವಾ ಹಿಂದೆ ಹೇಳಿದ ಉಪಬಂಧಗಳ ಮೇರೆಗೆ ಮುನ್ಸಿಪಲ್ ಕೌನ್ಸಿಲು ಅಂಥ ಲೈಸನ್ಸನ್ನು ಅಮಾನತುಗೊಳಿಸಬಹುದು, ತಡೆ ಹಿಡಿಂಬಹುದು ಅಥವಾ ಹಿಂದೆತೆಗೆದುಕೊಳ್ಳಬಹುದು.

೩. ಹಿಂದೆ ಹೇಳಿದ ಅಧಿಕಾರಿಗಳ ಮೇರೆಗೆ ಅವನು ಮಂಜೂರು ಮಾಡಿ ಕೊಟ್ಟ ಲೈಸನ್ಸಗಳನ್ನು ಮತ್ತು ಅನುಮತಿಗಾಗಿ ಸಂದಾಯ ಮಾಡ ಬೇಕಾದ ಎಲ್ಲ ನಿಧಿಗಳನ್ನು ಸ್ವಿಕರಿಸತಕ್ಕದು. ಮತ್ತು ಪುರಸಭೆ ನಿಧಿಗೆ ಜಮಾ ಮಾಡತಕ್ಕದು.

೪. ಪುರಸಭೆಯ ಮುಖ್ಯಾಧಿಕಾರಿಯು ಕೌನ್ಸಿಲನ ನಿಯಂತ್ರಣಕ್ಕೆ ಮತ್ತು ೭೨ನೇ ಪ್ರಕರಣ ಉಪ ಬಂದಗಳಿಗೆ ಒಳಪಟ್ಟು (ಅ) ೫೦೦ ರೂ ಮೀರಿದ ವೆಚ್ಚವನ್ನು ಒಳಗೊಂಡಿರದಂತೆ ಕರಾರುಗಳನ್ನು ಮುನ್ಸಿಪಲ್ ಕೌನ್ಸಿಲಗಳಪರವಾಗಿ ಮಾಡಿಕೊಳ್ಳಬಹುದು (ಆ) ಮುನ್ಸಿಪಲ್ ಕೌನ್ಸಿಲನ ಪರವಾಗಿ ಮತ್ತು ಸಾರ್ವಜನಿಕ ನೋಟಿಸ ಮೂಲಕ ಅನುಮೋಧಿತ ಕಾಮಗಾರಿಯ ನಿರ್ವಹಣೆಗಾಗಿ ಮುನ್ಸಿಪಲ್ ಕೌನ್ಸಿಲಗೆ ಅಗತ್ಯವಾದ ಯಾವುದೇ ಸಾಮಗ್ರಿಗಳು ಸ್ವರೂಪಗಳ ಸರಬರಾಜಿಗಾಗಿ ಟೆಂಡರ ಕರೆಯಬಹುದು. ೧೦೦ ಕ್ಕೂ ಮೀರಿದ ವೆಚ್ಚವನ್ನು ಒಳಗೊಂಡ ತರುವಾಯ ಒಂದು ದಿನದ ಒಳಗಾಗಿ ಅವನು ಮುನ್ಸಿಪಲ್ ಕೌನ್ಸಿಲನಿಗೆ ವರದಿ ಮಾಡತಕ್ಕದು.

೫. ಮುಖ್ಯಾಧಿಕಾರಿಯು ಪುರಸಭೆಗಳಿಗೆ ಅಡಕವಾದ ಯಾವುದೇ ಉಪ ಬಂದಗಳ ಮೇರೆಗೆ ಬರಹದಲ್ಲಿ ನೋಟಿಸಿನ ಮೂಲಕ ಅಂತಹ ಕಡ್ಡಾಯ ಕೋರಿಕೆ ಮಾಡಬಹುದು.

